# ಸಿದ್ಧಗಂಗಾ

ಸಂಪುಟ 27 ಸಂಚಿಕೆ 9 ಸೆಪ್ಟೆಂಬರ್ - 1991

ಬಸವಾದಿ ಶರಣರು ಸಂಸ್ಕೃತ ದ್ವೇಷಿಗಳಾಗಿರಲಿಲ್ಲ, ಕನ್ನಡ ಪ್ರೇಮಿಗಳಾಗಿದ್ದರು. ತಾವು ಒಪ್ಪಿಕೊಂಡ ಧರ್ಮಸಿದ್ಧಾಂತವನ್ನು ಪ್ರತಿಪಾದಿಸುವಾಗ ಅವರು ಸಂಸ್ಕೃತ ಭಾಷೆಯಲ್ಲಿದ್ದ ದರ್ಶನ ಗ್ರಂಥಗಳಿಂದಲೇ ಉದಾಹರಣೆಗಳನ್ನು ಕೊಟ್ಟಿದ್ದಾರೆಂಬುದು, ಅವರ ವಚನಗಳಿಂದಲೇ ವ್ಯಕ್ತವಾಗುತ್ತದೆ.

—ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

## ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಜ್ರಮಹೋತ್ಸವ ಸಮಿತಿ, ಶ್ರೀ ಸಿದ್ಧಗಂಗಾ ಮಠ.

### ವಿನಮ್ರ ಮನವಿ

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರೂ ತ್ರಿವಿಧ ದಾಸೋಹಿಗಳೂ ಪರಮ ತಪೋಧನರೂ ಆದ ಶಿವಯೋಗಿ ಪರಮ ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ಧರ್ಮಪೀಠ ಸ್ವೀಕಾರ ಸಂಸ್ಮರಣಾರ್ಥವಾಗಿ ವಜ್ರಮಹೋತ್ಸವವನ್ನು ಆಚರಿಸುವ ಮಹಾ ಯೋಜನೆಯನ್ನು ಶ್ರೀಮಠದ ಭಕ್ತಾದಿಗಳು ಅಭಿಮಾನಿಗಳು, ಹಿತೈಷಿಗಳು, ಹಳೆಯ ವಿದ್ಯಾರ್ಥಿಗಳು, ವಿಶ್ವವಿಖ್ಯಾತ ನೇತ್ರದಾನಿ ಪದ್ಮಭೂಷಣ ಡಾ॥ ಎಂ.ಸಿ. ಮೋದಿಯವರ ಗೌರವಾಧ್ಯಕ್ಷತೆಯೊಂದಿಗೆ, ಮಾನ್ಯ ಶ್ರೀ ಮುದ್ದಪ್ಪ ಐ.ಎ.ಎಸ್ (ನಿವೃತ್ತ) ರವರ ಕಾರ್ಯಾಧ್ಯಕ್ಷತೆಯಲ್ಲಿ ರೂಪಿಸಿಕೊಂಡು ಕಾರ್ಯೋನ್ಮುಖವಾಗಿದೆ.

ಇಪ್ಪತ್ತನೆಯ ಶತಮಾನದ ಅಪರೂಪದ ಮಹಾ ವಿಭೂತಿ ಪುರುಷರಾದ ಪರಮ ಪೂಜ್ಯ ಶ್ರೀ ಶ್ರೀ ಗಳವರು ಅರವತ್ತು ವರ್ಷಗಳಿಂದ ಸರ್ವಸಮಾಜದ ಉದ್ಧಾರಕ್ಕಾಗಿ ಹಗಲಿರುಳು ಶ್ರಮಿಸುತ್ತಿರುವುದು ನಾಡಿನೆಲ್ಲ ಹೃದಯವಂತರಿಗೆ ತಿಳಿದಿರುವ ವಿಚಾರವಾಗಿದೆ. ದೀನ ದಲಿತರ ಅಭಿವೃದ್ಧಿಗಾಗಿ ಪೂಜ್ಯ ಶ್ರೀ ಶ್ರೀಗಳವರು ಆಸಕ್ತಿವಹಿಸಿ ಗ್ರಾಮೀಣ ಬಂಧುಗಳು ಏಳ್ಗೆಯನ್ನು ಗಮನದಲ್ಲಿಟ್ಟುಕೊಂಡು ಸಲ್ಲಿಸುತ್ತ ಬಂದಿರುವ ನಿಷ್ಕಾಮ ಸೇವೆ ಅತ್ಯಂತ ಶ್ಲಾಘನೀಯವಾದುದು. "ಸೇವೆಯೇ ಶಿವಯೋಗ, ಕಾಯಕವೇ ಲಿಂಗಪೂಜೆ, ದಾಸೋಹವೇ ಮಾನವೀಯತೆ" ಎಂಬುದನ್ನು ಆಚರಿಸಿ ತೋರಿಸುತ್ತ ನಡೆದಿರುವ ಶಿವಯೋಗಿಗಳಿಗೆ ಕೃತಜ್ಞತಾ ಪೂರ್ವಕವಾಗಿ ಭಕ್ತಿ ನಮನಗಳನ್ನು ಸಲ್ಲಿಸಲು ಇದೊಂದು ಸುವರ್ಣಾವಕಾಶ.

ವಜ್ರಮಹೋತ್ಸವದ ಸಂಸ್ಮರಣಾರ್ಥಕವಾಗಿ ಶ್ರೀಮಠದಲ್ಲಿ ಅತ್ಯಂತ ವಿಶಾಲವಾದ 150 ಕೊಠಡಿಗಳನ್ನೊಳಗೊಂಡ ಬೃಹತ್ ವಿದ್ಯಾರ್ಥಿನಿಲಯವನ್ನು ಹಾಗೂ ಮೂರುಸಾವಿರ ಮಂದಿ ಕೂತು ಏಕ ಕಾಲದಲ್ಲಿ ಪ್ರಸಾದ ಸ್ವೀಕರಿಸುವಂಥ ಸುವಿಶಾಲ ಸುಸಜ್ಜಿತ ನೈರ್ಮಲ್ಯ ಪೂರ್ಣ ಪ್ರಸಾದನಿಲಯವನ್ನು ನಿರ್ಮಿಸುವ ಮತ್ತು ಶ್ರೀಮಠದ ಪರಿಸರ ಪರಿಶುದ್ಧವಾಗಿರುವಂತಹ ನೈರ್ಮಲ್ಯ ವ್ಯವಸ್ಥೆಯನ್ನು ರೂಪಿಸುವ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ.

(3ನೇ ರಕ್ಷಾ ಪುಟ ನೋಡಿ)

# ಸಿದ್ಧಗಂಗಾ

ಸಂಪುಟ – 27.  ಸಂಚಿಕೆ – 9.  ಸೆಪ – 1991.

### ಶ್ರೀ ಸಿದ್ಧಗಂಗಾ ಗುರುಕರುಣ ಶ್ರೀವಿಧಿ.

ಕಾವಿನಂದನ ಬನದಿ ಕೋಗಿಲೆಯೆ ನೀನಾದೆ
ಕಾಯ ವಾಚಾ ಮನದಿ ಸ್ವರಗೈದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

❁ ❁ ❁

ನೋಡಿಲ್ಲಿ ಗುರುದೇವ ಬಂದಿಹೆನು–ತವಪದಕೆ
ಬಿದ್ದುಹೋಗುವಮುನ್ನ ಹಾಡಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

❁ ❁ ❁

"ನಾನೆಂಬ ನೀನೆಂಬ ಜಗವೆಂಬ" ಮತಿಬಿಡಿಸಿ
ಅಂಗಲಿಂಗವೆಂಬ ಉಭಯವನು । ಕಳಚಿದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್. ವಿ. ವೀರಭದ್ರಯ್ಯ.

# ಶ್ರೀವಾಣಿ



**ಎರಡು ಬರುವುದಿಲ್ಲ.**

ಒಬ್ಬ ಶ್ರೀಮಂತನಿದ್ದ. ಸುಸಂಸ್ಕೃತ ಸ್ವಭಾವ ಅವನದು. ಕೌಟುಂಬಿಕ ಜೀವನ ತೃಪ್ತಿಕರವಾಗಿತ್ತು. ಒಂದು ಗಂಡು ಒಂದು ಹೆಣ್ಣು ಅವನನಿಗಿದ್ದ ಮಕ್ಕಳು. ಅತ್ಯಂತ ಇಂಗಿತಜ್ಞೆಯಾಗಿದ್ದ ಪತ್ನಿಯಿದ್ದಳು. ದಾಸೋಹ ಭಾವದ ಮನೋಧರ್ಮಿಯಾಗಿದ್ದಳು. ಅತಿಥಿ ಅಭ್ಯಾಗತರ ಸತ್ಕಾರದಲ್ಲಿ ತಾಯಿಗೆ ಎಲ್ಲಿಲ್ಲದ ಸಂತೋಷ. ಹನ್ನೆರಡನೆಯ ಶತಮಾನದ ಶರಣೆಯರನ್ನು ನೆನಪಿಗೆ ತರುವಂತ ನಡೆನುಡಿ ಅವರದಾಗಿತ್ತು. ಮಕ್ಕಳಿಬ್ಬರೂ ವಿದ್ಯಾವಂತರು. ಪ್ರಾಪ್ತ ವಯಸ್ಸಿಗೆ ಬಂದರು. ಮಗಳಿಗೆ ಲಗ್ನಮಾಡಬೇಕೆಂಬ ಪ್ರಯತ್ನನಡೆಸಿದರು ಅವರಿವರು ಬಂದುಹೋದರು. ಕೊನೆಗೆ ಒಂದು ಸಂಬಂಧ ಕುದುರಿತು. ಲಗ್ನವಾಯಿತು. ಅಳಿಯಂದಿರು ಸಾಕಷ್ಟು ಓದಿಕೊಂಡವರು. ಆಧುನಿಕ ಜೀವನ ವಿಧಾನವನ್ನು ಅಳವಡಿಸಿಕೊಂಡವರು. ಆದರೆ ನಿತ್ಯ ಅತೃಪ್ತಿ, ಅಶಾಂತಿಯನ್ನೇ ಬಿತ್ತಿಬೆಳೆಯುವ ಪ್ರವೃತ್ತಿಯವರು. ನಮ್ಮ ಹಿರಿಯರು ಹೇಳುವಂತೆ ಅರುವತ್ನಾಲ್ಕು ವಿದ್ಯೆಗಳಲ್ಲಿ ಅರುವತ್ತೆರಡು ವಿದ್ಯೆಗಳಲ್ಲಿ ಪಾರಂಗತರಾದವರು. ಶ್ರೀಮಂತರಿಗೆ ಅಳಿಯಂದಿರದೇ ಚಿಂತೆಯಾಯಿತು. ಎಲ್ಲ ಇದ್ದು ಅನುಭವವಿಸುವ ಅದೃಷ್ಟ ಹೀನರಾಗುತ್ತಿದ್ದಾರಲ್ಲಾ ಅಳಿಯಂದಿರೆಂದು ಯೋಚನೆಮಾಡುತ್ತಿದ್ದರು. ಯಾರಾದರೂ ತಮ್ಮಲ್ಲಿಗೆ ಬಂದಾಗ ಅಳಿಯಂದಿರನ್ನು ಕುರಿತು ಮಾತನಾಡುವ ಪ್ರಸಂಗಬಂದಾಗ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರೂ ನೋವನ್ನು ಅನುಭವಿಸುತ್ತಿದ್ದರು. ನಮ್ಮ ಅಳಿಯಂದಿರಿಗೆ ಅರವತ್ತೆರಡು ವಿದ್ಯೆಗಳು ಬರುತ್ತವೆ ಆದರೆ ಇನ್ನೆರಡು ವಿದ್ಯೆಗಳೇ ಅವರಿಗೆ ಬರಲಿಲ್ಲ ಎಂಬುದಾಗಿ. ಆ ಎರಡು ವಿದ್ಯೆ ಯಾವುದೆಂದು ಯಾರಾದರೂ ಕೇಳಿದರೆ ತುಂಬ ಸಂಕಟದಿಂದ ಹೇಳುತ್ತಿದ್ದರು. ಒಂದು ಸ್ವಂತ ಬುದ್ಧಿಯಿಲ್ಲ, ಇನ್ನೊಂದು, ಬಲ್ಲವರ ಮಾತನ್ನು ಕೇಳುವುದಿಲ್ಲ. ಇಂದು ನಮಗೆ ಬೇಕಾಗಿರುವುದು ಸ್ವಂತ ಬುದ್ಧಿ ಹಾಗೂ ಬಲ್ಲವರ ಮಾತನ್ನು ಕೇಳುವಂತ ಸದ್ಗುಣ. ಯುವಜನಾಂಗದಲ್ಲಿ ಕಾಣೆಯಾಗುತ್ತಿರುವ ಈ ಎರಡು ವಿದ್ಯೆಗಳನ್ನು ಬಿತ್ತಿಬೆಳೆಯುವಂಥ ಯೋಚನೆ ನಮ್ಮದಾಗಬೇಕು. ಶರಣರು ಇದನ್ನು ಬಲ್ಲವರಾಗಿದ್ದರು "ಅರಿವಿಂಗೆ ಅನುಭವವೇ ಆಶ್ರಯ"ವೆಂದರು. ಅಲ್ಲದೆ ವಿಚಾರದ ಒರೆಗಲ್ಲ ಮೇಲೆ ವಿಚಾರವನ್ನು ತಿಕ್ಕಿನೋಡಿದರು. "ಶರಣರ ಸೂಳ್ನುಡಿಯ" ಬೆಳಕಿನಲ್ಲಿ ಬಾಳಿದರು. ಪರಂಪರೆಯ ಅರಿವು ನಮ್ಮದಾಗುವಂತಹ ಜೀವನ ವಿಧಾನ ನಮ್ಮದಾಗಬೇಕು.

(15-4-86 ರಲ್ಲಿ ತರಿದಾಳು ಗ್ರಾಮದ ಬಸವಜಯಂತಿಸಮಾರಂಭದ ಆಶೀರ್ವಚನದಿಂದ ಸಂಗ್ರಹ)

**ಸಿದ್ಧಗಂಗಾ ಮಾಸ ಪತ್ರಿಕೆ**

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು

ಪ್ರೊ॥ ಚನ್ನಪ್ಪ ಎರೇಸೀಮೆ

* * *

ಸಂಪಾದಕರು

ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು

ಬಿ. ವೀರಭದ್ರಯ್ಯ

ಪಿ. ಎನ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ವಿತರಣೆ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ

ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 25-00ರೂ

ಆಜೀವ ಸದಸ್ಯತ್ವ 250-00 ರೂ


ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ದಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಶ್ರೀ ಸಿದ್ಧಲಿಂಗೇಶ್ವರ ವಚನ



ಪಶುವನೇರಿದ ಕೋಣ ಶಿಶು ವೇಧೆಗಾರ ನೋಡಾ
ಪಶುವಿನ ಒಡೆಯ ಕೋಣನ ನೆಬ್ಬಟ್ಟಲು
ಶಿಶುವಿನ ವೇದನೆ ಮಾಯವಾಯಿತ್ತು ನೋಡಾ
ಶಿಶುವೆದ್ದು ತನ್ನ ತಾಯನಪ್ಪಲು
ತಾಯಿ ತಂದೆಯನೊಡಗೂಡಿ ನಿಂದ ನಿಲವು ತಾನೊಂದೇ ನೋಡಾ
ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೇ

ಪಶು–ಅಜ್ಞಾನಿಮಾನವ, ಕೋಣ–ಮದ, ಶಿಶು–ಆತ್ಮ.

ಜೀವ ಭಾವದಿಂದ ಕೂಡಿ ವರ್ತಿಸುತ್ತಿರುವ ಜೀವನಿಗೆ ಅಷ್ಟಮದಗಳ ವ್ಯವಹಾರವುಂಟಾಗಿ ಆತ್ಮಶಿಶುವಿಗೆ ಪ್ರಪಂಚ ವೇದನೆಯನ್ನುಂಟು ಮಾಡುತ್ತಿದೆ. ಆಜೀವನಿಗೆ ಕರ್ತೃವಾದ ಸಜ್ಜೀವನಿಗೆ ಸುಜ್ಞಾನೋದಯವಾಗಿ, ಅಷ್ಟಮದಗಳು ನಷ್ಟವಾಗಿ ಅಷ್ಟವಿಧ ಭಕ್ತಿಸ್ವರೂಪವಾಗಲು ಆತ್ಮಶಿಶುವು ಜ್ಞಾನಶಕ್ತಿಯೊಡನೆ ಕೂಡಿ ಪರಶಿವಲಿಂಗದಲ್ಲಿ ಲೀನವಾದಾಗ ಜೀವ ಬೇರೆ ಪರಮ ಬೇರೆ ಎಂಬುದಳಿದು ಏಕಸ್ವರೂಪವಾಗಿತ್ತು.



## ಶ್ರೀ ಮದುದ್ದಾನೇಶ್ವರ ಶತಕಂ (ಮುಂದುವರಿದುದು)

— ಜೆ. ವಿ. ರಾಜಶೇಖರಯ್ಯ.

ಲೋಕದೊಳು ಸಂಸಾರದಂಗಡಿ
ಯೇಕೆನಲು ಗುರುಶಿಶುವುಗೋವ್ಗಳ
ನೇಕರತಿಥಿಗಳನ್ನು ಸೇವಿಸಿ ಭಾವಶುದ್ಧಿಯಲೀ।
ಕಾಕುಮತಿಯಳಿದುಳಿದ ನಿಜಸುವಿ
ವೇಕನಿಧಿ ಸಂಗ್ರಹಿಸಲೆನುತತಿ
ಜೋಕೆಯರುಪಿದ ಜೀಯಉದ್ದಾನೇಶದಯವಾಗೋ॥

ನೆರಳನತಿಥಿಗೆಕೊಡಲು ಮನೆಯಿದು
ಕರುಣೆಯಡಿಗೆಯ ಮಾಡಲತಿಥಿಗೆ
ಧರಣಿಧಾನ್ಯಕೆಪಶುವು ಹೈನಿಗೆ ತರಳನವಸರಕೇ।
ಸಿರಿಯುಪಾತ್ರದಿ ದಾನಮಾಡಲು
ಹರನುಕೊಟ್ಟಿಹನೆಂದು ತಿಳಿಸಿದ
ಶರಣಗಾತ್ರನೆ ಜೀಯ ಉದ್ದಾನೇಶದಯವಾಗೋ॥

ಲೋಕದರ ಮನೆಯೊಳಗೆ ದೇವರ
ಚಾಕರರು ನಾವೆಮಗೆ ಪ್ರಕೃತಿಯ
ನೇಕ ಸಂಬಳಸಾಕು ಸಾಕೆನುವಂತೆ ದೊರೆಯುವುದೂ।
ಸಾಕು ಸಾಲದ ರಾಜಜೀತಕ
ನೇಕಪರಿಮಿಗಿಲದರೊಳಗೇಜಗ
ಸಾಕಿ ಪಲಹುತ್ತಿರುವ ಉದ್ಧಾನೇಶ ದಯವಾಗೋ॥

ಐದುಭೂತಗಳೇ ಖಜಾನೆಗ
ಳೈದು ತತ್ವವೇ ಪಂಚಲೋಹದಿ
ದೈದುಮುಖದೊಳು ಹೊತ್ತುತಂದುದ ನಾರುಕಾಣದಲೂ।
ಹೊದ್ದುಮಲಗಿರೆ ಬುದ್ಧಿಗೆಟ್ಟರೆ
ನಿದ್ದೆಯೊಳಗಿರ ಲೊದ್ದಿ ಮುದ್ದಿಸಿ
ಗುದ್ದುಕೊಡುತಿಹ ಸಿದ್ಧ ಉದ್ದಾನೇಶ ದಯವಾಗೋ॥

# ಸಂಪಾದಕೀಯ

## ವೀರಶೈವಾಮೃತ ಮಹಾಪುರಾಣ

ದಿನಾಂಕ 18-8-1991 ರಂದು ಗುಬ್ಬಿಯಲ್ಲಿ ಗುಬ್ಬಿಯ ಮಲ್ಲಣಾರ್ಯ ವಿರಚಿತ ವೀರಶೈವಾಮೃತ ಮಹಾಪುರಾಣವು ಬಿಡುಗಡೆಯಾಯಿತು. ಕ್ರಿಶ, 1530ರಲ್ಲಿದ್ದ ಮಲ್ಲಣಾರ್ಯನ ಜನ್ಮಸ್ಥಳವಾದ ಅಮರಗೊಂಡದಲ್ಲಿ ( ಇಂದಿನ ಗುಬ್ಬಿ ) ಮಲ್ಲಿಕಾರ್ಜುನ ದೇವಸ್ಥಾನದ ಆವರಣದಲ್ಲಿ ನಡೆದ ಪುರಾಣಕೃತಿಯ ಬಿಡುಗಡೆಯಾದದ್ದು, ಆ ಸಂದರ್ಭದಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಬೆಳಗಾವಿಯ ನಾಗನೂರು ಮಠದ ಪರಮಪೂಜ್ಯ ಶ್ರೀ ಶ್ರೀ ಗಳವರು, ಗದಗ-ಡಂಬಳದ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದ ಪರಮಪೂಜ್ಯ ಶ್ರೀ ಶ್ರೀ ಗಳವರು, ಸಿದ್ಧಗಂಗಾ ಮಠದ ಪರಮ ಪೂಜ್ಯ ಶ್ರೀಶ್ರೀ ಗಳವರು, ಮತ್ತು ನಾಡಿನ ಪ್ರಸಿದ್ಧ ಸಂಶೋಧಕರೆಂದು ವಿದ್ವಾಂಸರೆಂದು ಹೆಸರುವೆತ್ತ ಡಾ॥ ಚಿದಾನಂದಮೂರ್ತಿಯವರು, ಎಂ. ಎಂ. ಕಲ್ಬುರ್ಗಿಯವರು, ಡಾ॥ ಎಸ್. ವಿದ್ಯಾಶಂಕರ್ ಅವರು, ಡಾ॥ ಎಂ. ಶಿವಕುಮಾರಸ್ವಾಮಿಗಳು ಡಾ॥ ಸಾ. ಶಿ ಮರುಳಯ್ಯನವರು ಭಾಗವಹಿಸಿ ವೀರಶೈವಾಮೃತ ಮಹಾ ಪುರಾಣದ ಬಗ್ಗೆ ಮಾತನಾಡಿ ಬೆಳಕು ಚೆಲ್ಲಿದ್ದು ಮಹತ್ವಪೂರ್ಣವಾಗಿತ್ತು. ಮಠ ಮಾನ್ಯಗಳು ಮಾಡುವ ಸಾಹಿತ್ಯ ದಾಸೋಹ ಇಂದು ನಿನ್ನೆಯದಾಗಿಲ್ಲ. ವೀರಶೈವ ಧರ್ಮದ ಪ್ರಮುಖ ಲಕ್ಷಣವಾದ ದಾಸೋಹ ಜಂಗಮಸ್ವರೂಪಿ-ಯಾದ ಸಮಾಜ ಸೇವೆ. ಸೇವೆಗೆ ತೆರೆದ ಬಾಗಿಲುಗಳು. ಅನೇಕ ವೀರಶೈವ ಮಠಗಳಂತೂ ಮುಕ್ತವಾಗಿ, ಎಲ್ಲ ಸಮಾಜದ ಜನತೆಗೂ ಸೇವಾ ಕೈಂಕರ್ಯವನ್ನು ಮಾಡುತ್ತ ಬಂದಿವೆ. ಬೆಳಗಾವಿಯ ನಾಗನೂರು ಶ್ರೀ ಮಠದ ವೀರಶೈವಾಮೃತ ಮಹಾಪುರಾಣವನ್ನು ಮರು ಮುದ್ರಿಸಿ ಪ್ರಕಟಿಸಿದ್ದು ಸ್ವಾಗತಾರ್ಹವಾದ ವಿಚಾರ. ದುರ್ಬಲವಾಗಿದ್ದ ಕೃತಿಯನ್ನು ಆಸಕ್ತರಿಗೆ ಲಭಿಸುವಂತಹ ಪುಣ್ಯ ಕಾರ್ಯವನ್ನು ಶ್ರೀ ಮಠ ಮಾಡಿದೆ. ನಾಗನೂರು ಮಠದ ಸೇವಾಮಣಿಹದಲ್ಲಿ ಸಹಕಾರ ಹಸ್ತವನ್ನು ನೀಡಿದ ಬೆಂಗಳೂರು ಬಸವ ಸಮಿತಿ ಹಾಗೂ ಗುಬ್ಬಿಯ ಮಲ್ಲಿಕಾರ್ಜುನ ದೇವಾಲಯದ ಸೇವಾ ಸಮಿತಿ ಸ್ಮರಣಾರ್ಹರಾಗಿದ್ದಾರೆ.

ವೀರಶೈವಾಮೃತ ಮಹಾಪುರಾಣ ಬೃಹತ್ ಎರಡು ಗ್ರಂಥ ಸಂಪುಟಗಳಲ್ಲಿ ಮರು ಮುದ್ರಿತವಾಗಿದೆ. ಕೃತಿ ಷಟ್ಪದಿಯಲ್ಲಿ ರಚಿತವಾಗಿದೆ, ಕೃತಿ ಆಗಮಗಳ ಆಧಾರದಮೇಲೆ ವಚನ ಸಿದ್ಧಾಂತದ ಆಧಾರದ ಮೇಲೆ ರಚಿತವಾಗಿದೆ, ಎಂಬುದಾಗಿ ವಿದ್ವಾಂಸರು ಹೇಳುತ್ತಾರೆ. ಕೃತಿಯಲ್ಲಿ ಅನೇಕ ಕಥೆಗಳು ಬರುತ್ತವೆ. ಸಿದ್ಧಾಂತದ ವಿಚಾರಗಳು ಬರುತ್ತವೆ. ‘ವೀರಶೈವ ವಿಶ್ವಕೋಶವೆಂಬಂತೆ ಕೃತಿಯಿದೆ ಎನ್ನುತ್ತಾರೆ ಬಲ್ಲವರು. ಸಮಾಜದ ಜನ ಸಾಮಾನ್ಯರು ಅಧ್ಯಯನ ಮಾಡುವುದಕ್ಕೆ ಅನುಕೂಲವಾಗುವಂತೆ ಕೃತಿಯನ್ನು ಗದ್ಯರೂಪದಲ್ಲಿ ಪ್ರಕಟಿಸುವ ಪ್ರಯತ್ನವನ್ನು ಸಮಾಜದಲ್ಲಿರುವ ಬಲ್ಲಿದರು ಬಲ್ಲವರು ಮಾಡುವುದು ಅಪೇಕ್ಷಣೀಯ. ವೀರಶೈವಾಮೃತ ಮಹಾಪುರಾಣ

ವಾಡಿರಲಿ, ಸಿದ್ಧಾಂತ ಶಿಖಾಮಣಿಯಾಗಿರಲಿ, ವಚನ ಸಾಹಿತ್ಯವಾಗಲಿ, ಒಟ್ಟಾರೆ ಶರಣ ಸಿದ್ಧಾಂತ ಸಾಹಿತ್ಯಕೃತಿಗಳು ಸಮಾಜದ ಪ್ರತಿಯೊಂದು ಕುಟುಂಬದ ಅಮೂಲ್ಯ ಆಸ್ತಿಯಾಗುವಂತಹ ಯೋಜನೆಯೊಂದು ರೂಪಿತವಾಗಬೇಕು. ನಾಡಿನ ಶ್ರೀಮಂತರು, ಹೆಸರಾಂತ ಮಠಗಳು, ಸಂಘ ಸಂಸ್ಥೆಗಳು, ಧಾರ್ಮಿಕ ಪ್ರತಿಷ್ಠಾನಗಳು, ಒಂದಾಗಿ ಮುಂದುವರಿಯಬೇಕು. ಒಂದು ಸಾಹಿತ್ಯ ಎಂಬುದು ಒಂದು ಜನಾಂಗದ ಜೀವಂತ ದಾಖಲೆ. ಕಾಲದೇಶಗಳುದ್ದಕ್ಕೂ ಬೆಳಕು ನೀಡುವ ದೀಪ ಎಂಬುದನ್ನು ಮರೆಯಬಾರದು. "ಸ್ಥಾವರಕ್ಕಳಿವುಂಟು - ಜಂಗಮಕ್ಕಳಿವಿಲ್ಲ" ಎಂಬುದನ್ನು ಸದಾ ಎಚ್ಚರಿಕೆಯ ನುಡಿಯನ್ನಾಗಿ ಪರಿಭಾವಿಸುವ ಮನಸ್ಸು ನಮ್ಮದಾಗಬೇಕು. "ಸಾಹಿತ್ಯ ಎಲ್ಲರಿಗಲ್ಲ" ಎಂದಾಗಬಾರದು, "ಸಾಹಿತ್ಯ ಎಲ್ಲರಿಗಿಲ್ಲ" ಎಂದಾಗದಂತೆ ನೋಡಿಕೊಳ್ಳಬೇಕು.

## ಬೆಳಕಾಗಿ ಬಾ ಬೇಗ.

ಬೆಳಕಾಗಿ ಬಾ ಬೇಗ । ಸಿದ್ಧಗಂಗಾ ಈಗ।
ಬಾಲಜ್ಯೋತಿಗಳಿರುವ । ಈ ಜಗದ ಶಾಲೆಯಲಿ ॥

ತಿಳಿವಿಗಿಂಮಿಗಿಲಾದ । ಬೆಳೆಯಿಲ್ಲ ಬಾ ಜನನಿ ।
ಇಳೆಯಪಟದೊಳು ಬೆಳಗಿ । ನಲಿದುನಾಟ್ಯವನಾಡು ॥

ಸಾಹಿತ್ಯಸಂಸ್ಕೃತಿಯು । ನೀತಿಕಲೆಗಳು ನೆಲಸಿ ।
ಸ್ವಾತಂತ್ರ್ಯಜನಕೋಟಿ । ಬೆಳಕುನಿನ್ನೊಳು ಬೆರೆತು ॥

ಅಧ್ಯಯನವೇತಪವು । ವಿದ್ಯಾರ್ಥಿಗಳಿಗೆಂದು ।
ಬೋಧನೆಯೆನಿಜಭಕ್ತಿ । ಅಧ್ಯಾಪಕರಿಗೆಂದು ॥

ಬುದ್ಧಬಸವಾದಿಗಳ । ಶುದ್ಧತತ್ತ್ವವಸಾರು ।
ಉದ್ಧರಿಸಬಾಬೇಗ ! ಬದ್ಧ ಕಂಕಣಳಾಗಿ ॥

ಕಾಯಕವೆ ಕೈಲಾಸ । ಕರ್ಮಯೋಗಿಗೆ ಜನನಿ ।
ತಾಯೆ ! ಬೇಗದಿಬಂದು । ಕಾಯಬೇಕೌ ಇಂದು ॥

ಅಸ್ಥಾನವಿದ್ವಾನ್, ಡಾ॥ ಬಸವರಾಜಶಾಸ್ತ್ರಿಗಳು.
ಬೃಹನ್ಮಠ, ಬಳ್ಳಾರಿ - 3

# ಕರಿಗೊಂಡ ನರನಾರಿಯರು

ಡಾ॥ ಸಿದ್ಧಯ್ಯ ಪುರಾಣಿಕ, ಶ್ರೀ ಗಿರಿ, 4/5 ಎ, ಆಲಿ ಆಸ್ಕರ್ ರಸ್ತೆ, ಬೆಂಗಳೂರು - 560052,

ಕರಿಗೊಳ್ಳು ಎನ್ನುವುದಕ್ಕೆ ಪರಸ್ಪರವಿರುದ್ಧಾರ್ಥಗಳಿವೆ. ಸೀದು ಕರಿಕಾಗು, ಕಂಗೆಡು, ಕಳಂಕಹೊಂದು, ಮಾಸು ಇತ್ಯಾದಿ ಒಂದು ಅರ್ಥ. ಗಾಢವಾಗು, ಗಟ್ಟಿಗೊಳ್ಳು, ಸ್ಥಿರವಾಗು ಇತ್ಯಾದಿ ಇನ್ನೊಂದು ಅರ್ಥ. ಮೊದಲನೆಯ ಅರ್ಥದಲ್ಲಿ ಕರಿಗೊಳ್ಳಲು ಯಾವ ಸಿದ್ಧತೆಯೂಬೇಕಿಲ್ಲ. ಎರಡನೆಯ ಅರ್ಥದಲ್ಲಿ ಕರಿಗೊಳ್ಳುದು ಕಠಕಷ್ಟ. ಈಎರಡನೆಯ ಅರ್ಥದಲ್ಲಿ ಕರಿಗೊಳ್ಳದ ನರನಾರಿಯರಿಲ್ಲದೆ ನಾಡುನುಡಿಗಳಿಗೆ ಬಲ ಬರದು. ಸಮಾಜ ಸುಭದ್ರವಾಗದು. ಪ್ರಗತಿ ತ್ವರಿತಗೊಳ್ಳದು. ಮೊದಲನೆಯ ಅರ್ಥದಲ್ಲಿ ಕರಿಗೊಂಡರಂತೂ ದೇಶದ ಭವಿತವ್ಯವೇ ಕರಿದಾಗುತ್ತದೆ.

ಭಾರತರತ್ನ ಡಾ॥ ಬಿ. ಆರ್. ಅಂಬೇಡಕರರು ಕೇಂದ್ರ ಮಂತ್ರಿಮಂಡಲ ಸೇರಿದಾಗ ಅವರ ಅನುಯಾಯಿಗಳಲ್ಲಿ ಕೆಲವರು ಪ್ರಶ್ನಿಸಿದರು ಅವರನ್ನು. "ನಮಗೆ ಕಾಂಗ್ರೆಸ್ಸಿನಿಂದ ದೂರವಿರಲು ಬೋಧಿಸಿದ ನೀವೇ ಕಾಂಗ್ರೆಸ್ ಮಂತ್ರಿಮಂಡಲ ಸೇರಿದರೆ ಹೇಗೆ"? ಅದಕ್ಕೆ ಅವರಿತ್ತ ಉತ್ತರವಿಲ್ಲಿ ಪ್ರಸ್ತುತ, ನಾನು ಸುಟ್ಟ ಇಟ್ಟಿಗೆ ಬಂಧುಗಳೆ, ನನ್ನನ್ನು ಎಷ್ಟುದಿನ ನೀರಿನಲ್ಲಿಟ್ಟರೂ ಕರಗಲಾರೆ. ಎಂಥ ನೀರಿನಲ್ಲಿಟ್ಟರೂ ಕರಗಲಾರೆ, ನೀವಿನ್ನೂ ಸುಟ್ಟುಗಟ್ಟಿಯಾಗದ ಇಟ್ಟಿಗೆಗಳು. ನಿಮಗೆ ನೀರಿನ ಭಯವಿರುವುದು. ತಾನು ನಂಬಿದ ತತ್ವಗಳಲ್ಲಿ ನಿಷ್ಠೆ ಗಟ್ಟಿಗೊಂಡ ಮೇಲೆ, ತನ್ನಲ್ಲಿ ತನಗೆ ವಿಶ್ವಾಸ ಸ್ಥಿರ ನಿಶ್ಚಲವಾದ ಮೇಲೆ ವಸ್ತುಗಳನ್ನು ಜೀವಿಗಳನ್ನು ನೋಡುವ ತನ್ನದೇ ಆದ ದೃಷ್ಟಿ ರೂಪಿತವಾದ ಮೇಲೆ ನರನಾರಿಯರಿಗೆ ಸಂದೇಹ, ಶೈಥಿಲ್ಯ ಶೀಲಹಾನಿಗಳ ನೀರಿನಲ್ಲಿ ಕರಗುವ ಭಯವಿಲ್ಲ.

ಸರ್ವ ಧರ್ಮ ಸಮನ್ವಯಾಚಾರ್ಯ ರಾಮಕೃಷ್ಣ ಪರಮಹಂಸರ ಇನ್ನೊಂದು ದೃಷ್ಟಾಂತ ಉಪಾಧೇಯ "ಹಾಲು ಹಾಲಾಗಿರುವವರೆಗೆ ಅದಕ್ಕೆ ನೀರಿನ ಭಯ, ಅದೇ ಹಾಲು ಕಾಯ್ದು ಹೆಪ್ಪಿನಿಂದ ಹೆತ್ತು ಮೊಸರಾಗಿ, ಕಡೆದು ಬೆಣ್ಣೆಯಾಯಿತೆಂದರೆ ಅದು ಕೆಡದಿರಲು ನೀರಿನಲ್ಲಿಯೇ ಇಡಬೇಕಾಗುತ್ತದೆ. ವಿಶುದ್ಧ ಶ್ರದ್ಧೆಯ, ತ್ತತ್ವ ನಿಷ್ಠೆಯ, ಶುಭ್ರ ಶೀಲಾ ಬೆಣ್ಣೆಯಾದ ಎಂದರೆ ಕರಿಗೊಂಡ ನರನಾರಿಯರಿಗೆ ಬದುಕಿನ ಕಡಲಿನ ಭಯವೆಲ್ಲಿ?

ವಿಶ್ವಜ್ಯೋತಿ ಅಕ್ಕಮಹಾದೇವಿ ಇನ್ನೂ ಮನೋಹರವಾದ ಸಾಮತಿಯನ್ನು ನಮಗೆ ಕೊಟ್ಟಿದ್ದಾಳೆ - ತನ್ನ ಈ ಅಮೂಲ್ಯ ವಚನದಲ್ಲಿ :

ಮುತ್ತು ನೀರಲ್ಲಾಯಿತ್ತು ವಾರಿಕಲ್ಲೂ ನೀರಲ್ಲಾಯಿತ್ತು ಉಪ್ಪು ನೀರಲ್ಲಾಯಿತ್ತು
ಉಪ್ಪು ಕರಗಿತ್ತು, ವಾರಿಕಲ್ಲು ಕರಗಿತ್ತು ಮುತ್ತು ಕರಗಿದುದನಾರು ಕಂಡವರಿಲ್ಲ
ಈ ಸಂಸಾರಿ ಮಾನವರು ಅಂಗವ ಮುಟ್ಟಿ ಭವಭಾರಿಗಳಾದರೆ
ನಾ ನಿಮ್ಮ. ಮುಟ್ಟಿ ಕರಿಗೊಂಡೆನಯ್ಯ ಚೆನ್ನಮಲ್ಲಿಕಾರ್ಜುನಾ.

ಸುಟ್ಟ ಇಟ್ಟಿಗೆಯ ಸಾಮತಿ, ಕಡೆದ ಬೆಣ್ಣೆಯ ಸಾಮತಿ, ಈಗ ಸಿಂಪಸ್ಸು ಸೇರಿದ ಸ್ವಾತಿಯ ಹನಿ ಸಿಂಪಿನ ಕಾಂತಿಯನ್ನೇ ಹೀರಿ ಮುತ್ತಾಗಿ ಮಿರುಗುವ ಸಾಮತಿ. ಜೀವಿ ಬದುಕಿನ ಸಿಂಪಿನಲ್ಲಿ ಮುತ್ತಾಗಿ ಕರಿಗೊಳ್ಳುವುದನ್ನು ಕಲಿತರೆ ಆ ಮೇಲೆ ಕರಗುವ, ಕರಿದಾಗುವ, ಮಾಸುವ, ಮುಸಕಾಗುವ, ಬಯವೆಲ್ಲಿ ? ಅದು ನತ್ತಾಗುವ ಮುತ್ತು ಕರಿದುಗೊಳಿಸುವ ಇದ್ದಿಲಲ್ಲ. ಇದ್ದಲಿನ ಎದೆಯಲ್ಲಿಯೂ ಅದೃಷ್ಟ ರೂಪದಲ್ಲಿ ವಜ್ರ ನಿದ್ರಿಸುತ್ತಿರುತ್ತದಂತೆ. ಅದನ್ನು ಎಬ್ಬಿಸಿ ಹೊರಗೆಳೆಯುವ ಹದ ಗಾರಿಕೆಯೇ ಕರಿಗೊಂಡ ನರನಾರಿಯರ ನಿರ್ಮಾಣಕ್ಕೂ ಬೇಕು. ದೇಶದಲ್ಲಿ ಇಂಥ ನರನಾರಿಯರ ಸಂಖ್ಯೆ ಹೆಚ್ಚಿ ದೇಶ ಕೀರ್ತಿಯ ಧವಳಗಿರಿಯನ್ನೇರಲೆಂದು ಹಾರೈಸೋಣ.

---

## ಮಿನುಗು ತಾರೆ

ಆಹಾ ! ಆಕಾಶದ ಈ ತಾರಕೆಗಳು, ಈ ಅಗಣಿತ ತಾರಾಗಣ – ಕರಿಯ ಕಾಳ ರಾತ್ರಿಯಲ್ಲಿ ಒಂದೊಂದೆ ಒಂದೊಂದೆ ಮೂಡಿ ನಿಶಾದೇವಿಯ ಮುಕುಟ ಮಣಿಗಳಂತೆ ನಭ – ಮಂಡಲವ ತುಂಬಿ ಬಿಡುತ್ತಿರುವುವು. ಅವುಗಳ ಮೂಡು ಮುಳುಗುಗಳನ್ನು ನಾನು ಪ್ರತಿನಿತ್ಯ ನೋಡುತ್ತಿರುವೆನು. ಆದರೇನು ಅವುಗಳ ಹುಟ್ಟು ಸಾವುಗಳನರಿತಿರುವರುಂಟೆ ? ಅವು ಕಾಣುವುದೇಕೆ ಅಡಗುವುದೇಕೆ ಯಾರು ಬಲ್ಲರು ? ಅವುಗಳ ಮಿನುಗಿನಿಂದೇನು ಕತ್ತಲೆ ಹರಿಯುವುದೆ ? ಇಲ್ಲ. ಪಥಿಕರಿಗೆ ದಾರಿ ಕಾಣುವುದೇ ? ಇಲ್ಲ. ಒಬ್ಬ ಬಡವನ ಮನೆ ಯಾದರೂ ಬೆಳಗುವುದೇ, ಸರ್ವಥಾ ಇಲ್ಲ. ಆದರೂ ವಿಶ್ವದೇವಿ ಘನ ನೀಲ ಪಾತ್ರೆಯಲಿ ಈ ಮಲ್ಲಿಗೆಯ ಹೂ ತುಂಬಿ ತುಂಬಿ ಶಾಂತ ನಿಶಾ ಸಮಯದಲ್ಲಿ ನಿನ್ನ ಗೂಢ ಪಾದಗಳ ಮೇಲೆ ನಿಚ್ಚ. ನಿಚ್ಚ. ಎರಚುತಿರುವಳು. ಆ ಚಿಕ್ಕೆಗಳಲಿ ನನ್ನನೊಂದು ಚಿಕ್ಕೆಯ ಮಾಡು ದೇವಾ, ಆ ಮಲ್ಲಿಗೆಯ ರಾಶಿಯಲಿ ಎನ್ನನೊಂದು ಅಡವಿ ಮಲ್ಲಿಗೆ ಮಾಡಿ ಇರಿಸು ಸ್ವಾಮಿ, ಎನ್ನ ಹುಟ್ಟು ನಾನರಿಯೆ ; ಯಾಕೆಂದು ಹೋಗುವೆ ಏನೆಂದು ಬರುವೆ ನಾನರಿಯೆ. ಬಂದುದೆಲ್ಲಿಂದ ಸಾಗುವುದೆಲ್ಲಿಗೆ ನಾನರಿಯೆ. ಇಲ್ಲಿರುವ ತನಕ ಮಿಣುಕಿ ಒಮ್ಮೆ ಯಾದರೂ ನಿನ್ನಡಿಯ ನೋಡಿದರೆ ಅದೇ ಎನ್ನ ಜೀವನ ಸಾರ್ಥಕ್ಯವು, ಜೀವದೊಡೆಯಾ, ಇದಕಾಗಿಯೆ ಮಿಡುಕುವೆ, ಇದನೆ ಬೇಡುವೆ, ಇದನೆ ಹಾಡುವೆ, ಕಾಡಿ, ಕಾಡಿ ನಿನ್ನನು ಇದನೆ ಕೇಳುವೆ, ಅಂತರಾತ್ಮಾ, ಕೊಟ್ಟು ಕಡೆ ಹಾಯಿತು.

ಆರ್. ದಿವಾಕರ

"ಅಂತರಾತ್ಮನಿಗೆ" —ಆಧಾರ :–ಸಮರ್ಪಣ.



## ಶಿವ ಶರಣರ ವಚನ ಉಗಮ ಭಾಗ-7

ಎನ್. ಚನ್ನಬಸಪ್ಪ. ಗಮಕಿ, 543, 5 ನೇ ಅಡ್ಡರಸ್ತೆ 8 ನೇ ಮುಖ್ಯರಸ್ತೆ,
ಮಹಾಲಕ್ಷ್ಮಿ ಲೇಔಟ್, ಬೆಂಗಳೂರು 86.

ಶರಣರು ಕಾಯಕ ಜೀವಿಗಳು. ದೇಹಶ್ರಮವಿಲ್ಲದೆ ತಿನ್ನುವುದು ವಿಷ ಪ್ರಮಾಣ ಎಂದು ನಂಬಿದವರು. ಅವರೆಲ್ಲರ ಸಾಮೂಹಿಕ ಪ್ರಯತ್ನದಿಂದ ದಾಸೋಹ ನಡೆಯುತ್ತಿದೆ. ಬಿಜ್ಜಳನ ಭಂಡಾರದ ಹಣದಿಂದಲೂ ಎಂದು ಬಸವಣ್ಣನವರು ತಮ್ಮನ್ನು ನಿಂದಿಸುವ ಜನವನ್ನು ಕುರಿತು

ವಚನ - 72. ಊರಮುಂದೆ ಹಾಲಹಳ್ಳ ಹರಿಯುತ್ತಿರಲು
ಓರೆ ಯಾವಿನ ಬೆನ್ನಲ್ಲಿ ಹರಿಯಲದೇಕಯ್ಯಾ ?
ಲಜ್ಜೆಗೆಡಲೇಕೆ ? ನಾಣುಗೆಡಲೇಕೆ ?
ಕೂಡಲ ಸಂಗಮ ದೇವಯ್ಯನುಳ್ಳನ್ನಕ್ಕ
ಬಿಜ್ಜಳನ ಭಂಡಾರವೆನಗೇಕಯ್ಯಾ ?

ಎಂದಾಗ ಇದು ಸರಿಯಾದ ಮಾತು ಅಣ್ಣಾ ಎಂದು ನಿಷ್ಟುರವಾದಿ ಚೌಡಯ್ಯ ಬಸವಣ್ಣನವರನ್ನು ಸಂತೈಸಿದ.

ಬಸವಣ್ಣನ ಅನುಗ್ರಹದಿಂದ ಮಹಾದೇವಿ ಬೊಮ್ಮಣ್ಣನನ್ನು ಹಿಂಬಾಲಿಸಿ ಕಲ್ಯಾಣವನ್ನು ಹೊಕ್ಕನುಡಿದಳು

ವಚನ - 73 ಕಲ್ಯಾಣವೆಂಬುದುನಾರಿಗೆ ಹೋಗಬಾರದು, ಹೋಗಬಾರದು
ಅಸಾಧ್ಯವಯ್ಯಾ, ಆಶೆಯಾಮಿಷ ಅಳಿದವಂಗಲ್ಲದೆ
ಕಲ್ಯಾಣದತ್ತ ಅಡಿ ಇಡಬಾರದು,
ಒಳ ಹೊರಗು ಶುದ್ಧ ವಾದವಂಗಲ್ಲದೆ ಕಲ್ಯಾಣವ ಹೋಗಬಾರದು
ನಾನೆಂಬುದ ಅರಿದವಂಗಲ್ಲದೆ ಕಲ್ಯಾಣವ ಹೋಗಬಾರದು
ಒಳಗು ತಿಳಿದು., ಚನ್ನಮಲ್ಲಿಕಾರ್ಜುನಂಗೊಲಿದು
ಉಭಯ ಲಜ್ಜೆಯಳಿದೆನಾಗಿ ಕಲ್ಯಾಣವ ಕಂಡು ನಮೋ ನಮೋ
ಎನುತಿರ್ದೆನು.

ಎಂದು ಕಲ್ಯಾಣದ ಮಹತ್ವವನ್ನು ಸಾಂಕೇತಿಕವಾಗಿ ಹೇಳಿಕೊಳ್ಳುತ್ತಾ ನಡೆದಳು.

ಅನುಭವ ಮಂಟಪವನ್ನು ಹೊಕ್ಕ ಮಹಾದೇವಿಯನ್ನು ಕುರಿತು ಪ್ರಭು "ಉದಮುದದ ಯೌವನವ ನೊಳಗೊಂಡ ಸತಿ ನೀನು ಇತ್ತಲೇಕೆ ಬಂದೆಯವ್ವಾ ? ಸತಿ ಎಂದರೆ ಮುನಿವರು ನಮ್ಮ ಶರಣರು. ನಿನ್ನ ಪತಿಯ ಕುರುಹು ಹೇಳಿದರೆ ಬಂದು ಕುಳ್ಳಿರು, ಅಲ್ಲವಾದರೆ ತೊಲಗುತಾಯೆ– ಪ್ರಭುದೇವನ ಮಾತು ಮಹಾದೇವಿಯ ಮನಸ್ಸನ್ನು ತಾಗಿತು. ಆಗ ನುಡಿದಳು– "ಹರನೇ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೆ ನೋಡಾ! ಅದು ಈ ಜನ್ಮದಲ್ಲಿ ನನಗೆ ಸಿದ್ಧಿಸಿದೆ. ಗುರು ನನ್ನನ್ನು ಚನ್ನ ಮಲ್ಲಿಕಾರ್ಜುನನಿಗೆ ಮದುವೆಮಾಡಿ ಕೊಟ್ಟಿದ್ದಾನೆ.

**ವಚನ - 74** ಗುರುವೆ ತೆತ್ತಿಗನಾದ ಲಿಂಗವೆ ಮದುವಳಿಗನಾದ,
ನಾನೆ ಮದುವಳಿಗೆಯಾದೆನು. ಈ ಭುವನವೆಲ್ಲವರಿಯಲು
ಅಸಂಖ್ಯಾತರೆನಗೆ ತಾಯಿ ತಂದೆಗಳುಕೊಟ್ಟರು
ಪ್ರಭುವಿನ ಮನೆಗೆ ಸಾದೃಶ್ಯವಪ್ಪವರನ ನೋಡಿ,
ಇದು ಕಾರಣ ಚನ್ನಮಲ್ಲಿಕಾರ್ಜುನ ಗಂಡನೆನಗೆ
ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲಯ್ಯಾ ಪ್ರಭುವೇ.

ಈ ಮಾತನ್ನು ಕೇಳಿ ಶರಣರು ತಲೆದೂಗಿದರು ಬಸವಣ್ಣನೂ ಸಂತೋಷ ಭರಿತ ನಾದನು.

ಪ್ರಭುವು ಮುಂದೆ ಆಕೆಯನ್ನು ಪರೀಕ್ಷಿಸುತ್ತಾ ನಗುತ್ತಾ ಕೇಳಿದ "ನಿನ್ನ ದೇಹದ ಮೇಲಿನ ಮೋಹ ನಿನಗಿನ್ನೂ ಬಿಟ್ಟಿಲ್ಲ ನಿನ್ನ ಸೌಂದರ್ಯದ ಹೆಮ್ಮೆ ನಿನಗಿನ್ನೂ ಉಳಿದಿದೆಯಲ್ಲವೆ ? ಅಂದಾಗ

**ವಚನ - 75** "ಇಲ್ಲ ನನ್ನ ಸೌಂದರ್ಯದ ಮೋಹ ನನಗೆಳ್ಳಷ್ಟೂ ಉಳಿದಿಲ್ಲ.
ಕಾಯಕರ್ರನೆ ಕಂದಿದರೇನಯ್ಯಾ ? ಕಾಯಮಿರ್ರನೆ ಮಿಂಚಿದಡೇನಯ್ಯಾ
ಅಂತರಂಗ ಶುದ್ಧವಾದ ಬಳಿಕ, ಚನ್ನಮಲ್ಲಿಕಾರ್ಜುನ
ಒಲಿದಕಾಯವು ಹೇಗಿದ್ದಡೇನಯ್ಯಾ."

ಎಂದು ಉತ್ತರಿಸಿದಳು. ಆಗ ಪ್ರಭುವು ದೇಹದ ಹಂಗನ್ನು ಬಿಟ್ಟು ಕೂದಲ ಮರೆ-ಮಾಡಿಕೊಂಡು ನಡೆದಿರುವೆ ಎಂದಾಗ ಅದು ನನಗಾಗಿ ಅಲ್ಲ ನಿಮಗಾಗಿ ಅಂದರೆ ಜನರ ಹಂಗಿಗಾಗಿ ಈ ರೀತಿ ಅವಲಂಬಿಸಿದ್ದೇನೆ ಎಂದು ಹೇಳಿ

**ವಚನ - 76** ಫಲ ಒಳಗೆ ಪಕ್ವವಾಗಿಯಲ್ಲದೆ ಹೊರಗಣ ಸಿಪ್ಪೆ ಒಪ್ಪಗೊಡದು;
ಕಾಮನ ಮುದ್ರೆಯಕಂಡು ನಿಮಗೆ ನೋವಾದೀತೆಂದು



ಆ ಭಾವದಿಂದ ಮುಚ್ಚಿದೆ. ಇದಕ್ಕೆ ನೋವೇಕೆ ?
ಕಾಡದಿರಣ್ಣಾ ಚನ್ನಮಲ್ಲಿಕಾರ್ಜುನ ದೇವರ ದೇವನ ಒಳಗಾದವಳಾ.

ಈ ದಿಟ್ಟತನದ ಮಾತಿಗೆ ಮೆಚ್ಚಿ ಶರಣರೆಲ್ಲಾ ಸಂತೋಷಿಸಿದರು ಆದರೆ ಅಲ್ಲಮ ಪ್ರಭುವು

**ವಚನ - 77** ನಾ ಸತ್ತೆನೆಂದು ಹೆಣ ಕೂಗಿದುಂಟೇ ?
ಬೈಚಿಟ್ಟ ಬಯಕೆ ಕರೆದುದುಂಟೇ ?
ಹೆಪ್ಪಿಟ್ಟ ಹಾಲು ಸಿಹಿಯಪ್ಪುದೇ ?
ಈ ಮಾತು ಒಪ್ಪವಲ್ಲ ಗುಹೇಶ್ವರ ಲಿಂಗಕ್ಕೆ

ಎಂದಾಗ ಮಹಾದೇವಿ "ಸತ್ತ ಹೆಣ ಕೂಗಿದುದುಂಟು. ಮತ್ತೆ ಒರಗಿ ಕನಸಕಂಡು ಅದನ್ನು ಹೇಳುವಲ್ಲಿ ಸತ್ತ ಹೆಣ ಎದ್ದಂತೆಯೇ ಅಲ್ಲವೆ ? ಹೆಪ್ಪಿಟ್ಟ ಹಾಲು ತುಪ್ಪವಾಗಿ ಸಿಹಿಯಾಗುತ್ತದೆ. ಅಂತೆಯೇ ತನ್ನ ಋಣ ನಿಧಾನ ಎದ್ದು ಕರೆಯಿತ್ತೇ. ಇದನ್ನು ನಿಶ್ಚಯಿಸಿ ನೋಡಿರಿ." ಅಲ್ಲದೆ ಮುಂದುವರಿದು "ಕಾಮನ ಗೆದ್ದ ತಾವನ್ನು ಹೇಳ ಬೇಕೇ ಪ್ರಭುವೇ" ಇಲ್ಲ ಇನ್ನೂ ಮುಂದುವರಿದು ಹೇಳುತ್ತೇನೆ; ಕಾಮವನ್ನು ಗೆಲ್ಲುವುದಕ್ಕೆ ಆ ಕಾಮ ನನ್ನ ಮನಸ್ಸಿನಲ್ಲಿ ಹುಟ್ಟಿಯೇ ಇಲ್ಲ, ಕೇಳಿರಿ :

**ವಚನ-78** ಅಂಗದ ಭಂಗವ ಲಿಂಗ ಸುಖದಿಂದ ಗೆಲಿದೆ,
ಮನದ ಭಂಗವ ಅರುಹಿನ ಮುಖದಿಂದ ಗೆಲಿದೆ,
ಜೀವದ ಭಂಗವ ಶಿವಾನು ಭವದಿಂದ ಗೆಲಿದೆ,
ಕರಣದ ಕತ್ತಲೆಯ ಬೆಳಗ ನುಟ್ಟು ಗೆಲಿದೆ,
ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಣ್ಣಿಂಗೆ ತೋರುವ ಕಾಮನ
ಸುಟ್ಟುರುಹಿದ ಭಸ್ಮವ ನೋಡಯ್ಯಾ !
ಚನ್ನಮಲ್ಲಿಕಾರ್ಜುನ-ಕಾಮನ ಕೊಂದು ಮನಸಿಜನಾಗುಳು ಹಿದರೆ
ಮನಸಿಜನ ತಲೆಯ ಬರಹವ ತೊಡೆದೆನು.

ಎಂದಾಗ ಪ್ರಭು ಬಸವಣ್ಣನೊಡನೆ ನಾನು ಈ ನಿಲವನ್ನು ಪ್ರಕಟಿಸ ಬೇಕೆಂದು ಹೋಗಿ ನಿಷ್ಠುರನಾದೆ. "ಮಹಾದೇವಿಯಕ್ಕನ ಶ್ರೀ ಪಾದಕ್ಕೆ ನಮೋ ನಮೋ ಎಂದ ಶರಣೆರೆಲ್ಲರೂ ಜಯಘೋಷ ಮಾಡಿದರು. ಮಹಾದೇವಿ ಪ್ರಭು ಬಳಿಗೆ ಬರುತ್ತಿದ್ದಂತೆ ಸಾಷ್ಟಾಂಗ ಪ್ರಣಾಮ ಮಾಡಿದಳು, ಪ್ರಭುದೇವ ಅವಳನ್ನು ಸಂತೈಸುತ್ತಾ :

**ವಚನ-79** ಅಂಗ ಅಂಗನೆಯ ರೂಪಲ್ಲದೆ ಮನವಸ್ತು ಭಾವದಲ್ಲಿ ಬೆಚ್ಚಂತಿರ್ಪುದು
ಬಂದ ಕಥನದಲ್ಲಿ ಬಂದು ಹಿಂಗಿದೆಯಲ್ಲಾ !
ಅಕ್ಕ, ಗುಹೇಶ್ವರ ಲಿಂಗದಲ್ಲಿ ಉಭಯನಾಮವಳಿದೆ ಎನ್ನಕ್ಕಾ !

ಆಗ ಬಸವಣ್ಣ ಈಕೆ ನಮೆಲ್ಲರಅಕ್ಕ. ಅಕ್ಕಮಹಾದೇವಿ ಶರಣು ಶರಣಾರ್ಥಿ" ಎಂದು ನಮಸ್ಕರಿಸಿದ. ಮಹಾದೇವಿ ಇನ್ನೂ ವಿನೀತಳಾಗಿ, ತಾವು ಹಾಗೆ ಹೇಳಬಾರದು ಅಣ್ಣಾ ನಿಮ್ಮೆಲ್ಲರ ಕರುಣೆಯ ಶಿಶು ನಾನು. ನಿಮ್ಮೆದುರಿನಲ್ಲಿ ಅತಿ ಚಿಕ್ಕವಳು" ಆಗ ಚನ್ನಬಸವಣ್ಣ ಹೇಳಿದ "ಇರಬಹುದು. ವಯಸ್ಸು ಅತಿ ಚಿಕ್ಕದೇ ಆದರೆ ಹಿರಿಯತನ ವಯಸ್ಸಿನಿಂದ ಮಾತ್ರವೇ ಬರುವುದಿಲ್ಲ ತಾಯಿ ಆಜಕಲ್ಪ ಕೋಟಿ ವರ್ಷದವರೆಲ್ಲರೂ ಹಿರಿಯರೇ? ಹಿರಿದು ಕಿರಿದೆಂಬ ಭೇದವನ್ನು ಮರೆದು ಬೆರೆಸಿ ಬೇರಿಲ್ಲದಿಪ್ಪ, ಹಿರಿಯ ತನ ಮಹಾದೇವಿಯಕ್ಕಂಗಾಯಿತು" ಎಂದು ಘೋಷಿಸಿದ.

ಬಸವಣ್ಣನ ಮೇಲೆ ಅಪವಾದ ಹೊರಿಸುವ ಪ್ರಯತ್ನ ವಿಫಲವಾದ ಮೇಲೂ ಋಗ್ವೇದಿ ದಾಮೋದರ, ಚತುರ್ವೇದಿ ಕೃಷ್ಣರಸ ಸಾಮವೇದಿ ಅಪ್ಪಣ್ಣ ಮೊದಲಾದ ಪ್ರಮುಖರು ತಮ್ಮ ಪ್ರಯತ್ನವನ್ನು ಕೈ ಬಿಡಲಿಲ್ಲ. ಇದನ್ನು ಕಂಡ ಕೆಲವು ಶರಣರು ಅವರ ಮೇಲೆ ಕೆರಳಿ ಬಿದ್ದರು. ಆಗ ಬಸವಣ್ಣನವರು "ದ್ವೇಷದಿಂದ ದ್ವೇಷವನ್ನು ಗೆಲ್ಲುವುದು ಸಾಧ್ಯವಿಲ್ಲ. ಅವರು ಏನೇ ಮಾಡಿದರೂ ನಾವು ದ್ವೇಷಿಸುವುದು ಸಲ್ಲದು." ಆಗ ಉಗಮವಾದ ವಚನ :-

**ವಚನ**-80 ತನಗೆ ಮುನಿವರಿಗೆ ತಾಮುನಿಯಲೇಕಯ್ಯಾ?
ತನಗಾದ ಆಗೇನು? ಅವರಿಗಾದ ಚೇಗೇನು?
ತನುವಿನ ಕೋಪ ತನ್ನ ಹಿರಿಯ ತನದ ಕೇಡು!
ಮನದ ಕೋಪ ತನ್ನರುಹಿನ ಕೇಡು! ಮನೆಯೊಳಗಣ ಕಿಚ್ಚು ಮನೆಯ
ಸುಟ್ಟಲ್ಲದೆ ನೆರೆಮನೆಯ ಸುಡದು ಕೂಡಲಸಂಗಮ ದೇವಾ,

ಬಸವಣ್ಣನವರು ಈ ರೀತಿ ಶರಣರಿಗೆ ಎಚ್ಚರಿಕೆ ನೀಡುತ್ತಿದ್ದರು.

ಇನ್ನು ಕೆಲವು ಶರಣರ ಅತ್ಯಭಿಮಾನ, ಅನೇಕ ಸಮಸ್ಯೆಗಳಿಗೆ ಕಾರಣವಾಗುತಿತ್ತು. ಘರ್ಷಣೆಗಳು ನಡೆದು ಒಮ್ಮೊಮ್ಮೆ, ರಾಜಾಸ್ಥಾನದವರೆಗೂ ದೂರುಗಳು ಹೋಗುತ್ತಿದ್ದುವು. ಇದನ್ನು ಕೇಳಿದಾಗಲೆಲ್ಲಾ ಬಸವಣ್ಣನ ಮನಸ್ಸು ನೊಂದು ಕೊಳ್ಳುತ್ತಿತ್ತು. ಆಗ ಬಸವಣ್ಣ :-

**ವಚನ** 81. ಕೂಪವರಿಗೆ ಹೇಳುವೆನು ಕುಳಸ್ಥಳಂಗಳೆಲ್ಲವನು;
ಕೂರದವರಿಗೆ ಹೇಳಿ ನಾನೇವೆನು ಶಿವನೆ?
ಕರಲ ಭೂಮಿಯಲ್ಲಿ ಕರೆದ ವೃಷ್ಟಿಯ ತೆರನಂತೆ.
ಅವರೆತ್ತ ಬಲ್ಲರು ಎನ್ನ ಸುಖದುಃಖವ?
ಅಂಗತ ಪಿಲ್ಲದ ಸಂಗವು ಅಳಲಿಲ್ಲದ ಹುಯ್ಯಲಂತೆ.



ಎಂದು ಆ ನೋವನ್ನು ತನ್ನಲ್ಲಿಯೇ ಅಡಗಿಸಿ ಕೊಳ್ಳುವನು

ಒಮ್ಮೆ ಪ್ರಭುದೇವ ಮಂದಹಾಸದ ದೃಷ್ಟಿಯನ್ನು ಬಸವನತ್ತ ಬೀರಿ ಹೇಳಿದ ನಿನ್ನ ಈ ನಿರಹಂಕಾರದ ಸಹಜ ವಿನಯ ಸಾಧಕರಿಗೆ ಕೈ ದೀವಿಗೆಯಾಗಲಿ ಬಸವಣ್ಣ ಮೇಲಾಗ ಲೊಲ್ಲೆನು ಕೀಳಾಗಲೊಲ್ಲದೆ; ಕೀಳಿಂಗಲ್ಲದೆ ಹಯನು ಕರೆವುದೆ.? ಈ ಮಾತು ಎಲ್ಲರಿಗೂ ಉಜ್ವಲ ಆದರ್ಶವಾಗಬೇಕು. ಈ ವಿಷಯದಲ್ಲಿ ನಮ್ಮೆಲ್ಲರಿಗೂ ನೀನು ಗುರು ಬಸವಣ್ಣ.

**ವಚನ** :- 82 ಅದ್ವೈತವ ನುಡಿದು ಅಹಂಕಾರಿ ಯಾದೆನಯ್ಯಾ;
ಬ್ರಹ್ಮವ ನುಡಿದು ಭ್ರಮಿಕನಾದೆನಯ್ಯಾ.
ಶೂನ್ಯವ ನುಡಿದು ಸುಖದುಃಖಕ್ಕೆ ಗುರಿಯಾದೆನಯ್ಯಾ.
ಗುಹೇಶ್ವರಾ ನಿಮ್ಮ ಶರಣ ಸಂಗನ ಬಸವಣ್ಣನ
ಸಾನ್ನಿಧ್ಯದಿಂದಾನು ಸದ್ಭಕ್ತನಾದೆನಯ್ಯಾ!

ಇದನ್ನು ಕೇಳಿ ಶರಣರೆಲ್ಲಾ ಸಂತೋಷವನ್ನು ವ್ಯಕ್ತಪಡಿಸಿದರು. ಬಸವಣ್ಣ ಭಕ್ತಿಯಿಂದ ಬಾಗಿ ಕುಳಿತ.

---

ಬನಮುಂ ಪಟ್ಟಣಮಪ್ಪುದು। ಜನರೆಲ್ಲರ್ ಸಜ್ಜನರಪ್ಪರೀ ನೆಲನೆಲ್ಲಂ॥
ಧನ ಕನಕ ವಸ್ತುಪೂರಿತ। ಮೆನಿಪುದಣಂ ಪೂರ್ವಪುಣ್ಯವುಳ್ಳಂಗನಿಶಂ॥
ಕರಮೆಸೆಗುಂ ದಾನದೆ, ಕಿವಿ। ಮೆರೆಗುಂ ಶ್ರುತದಿಂದ, ಕಡುಕಕಂಡುಗಳಿನೇಂ॥
ಕರುಣಾಳುಗಳೊಡಲೆಸಗುಂ।. ಪರಹಿತದಿಂ, ಚಂದನಾನುಲೇಪನದಿಂದೇಂ॥
ವಿದ್ಯೆಯೆ ಸಿರಿರೂಪು, ವಿದ್ಯೆಯೆ ನಿಗೂಢ ಸುರಕ್ಷಿತವಾದ ವಿತ್ತಮುಂ।
ವಿದ್ಯೆಯೆ ಕೀರ್ತಿಬೋಗರ ವಿದ್ಯೆಯೆ ದೇಶಿಕರ್ಗೆಲ್ಲ ದೇಶಿಕಂ॥
ವಿದ್ಯೆಯೆ ಬಂಧುವಪ್ಪುದು ವಿದೇಶದೆ, ವಿದ್ಯೆಯೆ ರಾಜಪೂಜ್ಯಮುಂ।
ವಿದ್ಯೆಯದಿಲ್ಲದಿರ್ಪ ಮನುಜಂ ಬಗೆಯುಪ್ಪಶುವಲ್ತೆ ಧಾತ್ರಿಯೊಳ್॥

—ಬಸವಪ್ಪ ಶಾಸ್ತ್ರಿಗಳ ಕನ್ನಡ ಭರ್ತೃಹರಿ ಸುಭಾಷಿತ

# ವಿಜ್ಞಾನ ಮತ್ತು ಆಧ್ಯಾತ್ಮ

ಎಚ್. ಎಸ್. ನರಸಿಂಹ ಜೀಯರ್, ಶ್ರೀ ಬಸವೇಶ್ವರ ಶಾಲೆ, ತುಮಕೂರು.

ಭಾರತದ ದೇಶದ ಋಷಿಗಳು, ಸಂತರು ತಮ್ಮ ಯೋಗ ಸಾಧನೆ ಹಾಗೂ ತಪಸ್ಸಿನಿಂದ ಅತೀಂದ್ರಿಯ ಜ್ಞಾನ ಪಡೆದಿದ್ದರು. ಭೂತ, ಭವಿಷ್ಯತ್ ಹಾಗೂ ವರ್ತಮಾನಗಳನ್ನೆಲ್ಲಾ ಬಲ್ಲವರಾಗಿದ್ದರು. ನಮ್ಮ ವೇದ ಪುರಾಣಗಳಲ್ಲಿ ಇಂತಹ ಅನೇಕ ಪ್ರಸಂಗಗಳು ಇವೆ.

ಆದರೆ ವಿಜ್ಞಾನ ಇದನ್ನು ನಂಬುವುದಿಲ್ಲ. ಭವಿಷ್ಯತ್‌ನಲ್ಲಿ ನಡೆಯಬಲ್ಲುದನ್ನು ಹಾಗೂ ವರ್ತಮಾನದಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ನಡೆಯುತ್ತಿರುವುದನ್ನೂ ತಿಳಿಯಲು ಅಸಾಧ್ಯವೆಂಬ ಭಾವನೆ ಇದೆ. ಸಿದ್ಧಮಾಡಿ ತೋರಿಸುವುದಷ್ಟೇ ಸತ್ಯ, ಉಳಿದುದೆಲ್ಲವೂ ಭ್ರಮೆ ಎಂಬುದು ವಿಜ್ಞಾನಿಗಳ ವಾದ. ಯಾವುದಾದರೂ ಇರುವುದಾದರೆ ಅದನ್ನು ಅಳೆಯುವುದು ಸಾಧ್ಯವಾಗಬೇಕು, ಪ್ರಯೋಗಶಾಲೆಯಲ್ಲಿ ಸಿದ್ಧಮಾಡಿ ತೋರಿಸಬೇಕು. ಇಂದ್ರಿಯ ಗ್ರಾಹ್ಯವಲ್ಲದ, ಅನುಭವಿಸಲಾರದ, ಪ್ರಯೋಗಮಾಡಲಾಗದ ಯಾವುದನ್ನೂ ನಂಬಬಾರದು ಎಂಬ ಭಾವನೆ ವಿಜ್ಞಾನ ಬೆಳೆದಂತೆ ಜನಗಳಲ್ಲಿ ಮೂಡುತ್ತಾ ಬಂದಿದೆ.

ಅತೀಂದ್ರಿಯ ಜ್ಞಾನದ ಬಗ್ಗೆಯೂ ಇದೇ ಭಾವನೆ ಬೆಳೆದು ಬಂದಿತ್ತು. ಇತ್ತೀಚೆಗೆ ಈ ವಿಚಾರದಲ್ಲಿ ಸಾಕಷ್ಟು ಸಂಶೋಧನೆ ನಡೆದಿದೆ ಹಾಗೂ ನಡೆಯುತ್ತಿದೆ. ಈಗೀಗ ವಿಜ್ಞಾನಿಗಳ ನಿಲುವು ಸಹ ಈ ವಿಚಾರದಲ್ಲಿ ಬದಲಾವಣೆಯಾಗುತ್ತಿದೆ. ಈ ಬಗ್ಗೆ ವಿಚಾರ ಮಾಡೋಣ.

ನಮ್ಮ ದೇಶದಲ್ಲಿಯೇ ಅಲ್ಲದೆ ವಿಶ್ವದ ನಾನಾ ಭಾಗಗಳಲ್ಲಿ ದಾರ್ಶನಿಕರು, ಸಂತರು ಹೇಳಿರುವ ಭವಿಷ್ಯಗಳಲ್ಲಿಯೂ ನಿಜವಾಗಿರುವ ಅನೇಕ ಉದಾಹರಣೆಗಳಿವೆ. ಫ್ರಾನ್ಸ್ ದೇಶದ ಮಹಾಸಂತ ನಾಸ್ಟರ್ ಡ್ಯಾಮ್ಸ್ (Nosterdamns) ರವರು 2500 ಭವಿಷ್ಯವಾಣಿ ನುಡಿದಿದ್ದಾರೆ. (16 ನೆಯ ಶತಮಾನದಲ್ಲಿ) ಇವು ಇಡೀ ವಿಶ್ವದಲ್ಲಿ ನಡೆಯುವ ಘಟನೆಗಳಿಗೆ ಸಂಬಂಧಿಸಿವೆ. ಇವುಗಳಲ್ಲಿ ಅಂದರೆ ಇತ್ತೀಚಿನ 400 ವರ್ಷಗಳಲ್ಲಿ ಆವರು ಹೇಳಿರುವ 800 ಭವಿಷ್ಯಗಳು ನಿಜವಾಗಿವೆ. ಇವುಗಳಲ್ಲಿ ಪ್ರಮುಖವಾದವುಗಳೆಂದರೆ 1792 ರಲ್ಲಿ ನಡೆದ ಫ್ರಾನ್ಸಿನ ಮಹಾಕ್ರಾಂತಿ, ಈ ಶತಮಾನದ ಆದಿಯಲ್ಲಿ ಜರುಗಿದ ಎರಡು ಪ್ರಪಂಚದ ಮಹಾಯುದ್ಧಗಳು ಜರ್ಮನಿಯಲ್ಲಿ ಹಿಟ್ಲರನ ಉದಯ ಮತ್ತು ಪತನ ಹಾಗೂ ಇತ್ತೀಚಿನ ಕುವೈಟ್ ಮೇಲೆ



ಇರಾಕಿನ ಧಾಳಿ ಮುಂತಾದವುಗಳು. ಇವೆಲ್ಲವೂ ಆತನು ಹೇಳಿರುವ ವರ್ಷಗಳಲ್ಲಿ ಕರಾರುವಕ್ಕಾಗಿ ನಡೆದಿವೆ. ಈ ವಿಷಯ ಈಗ ಇಡೀ ವಿಶ್ವಕ್ಕೆ ಗೊತ್ತಿರುವ ವಿಚಾರವಾಗಿದೆ. 1759 ರಲ್ಲಿ ಸ್ವೀಡನ್ ಬೋರ್ಗ್ ಎಂಬ ದಾರ್ಶನಿಕ ತಾನಿದ್ದ ಊರಿನಿಂದ 300 ಮೈಲು ದೂರದಲ್ಲಿದ್ದ ಸ್ಟಾಕ್ ಹೋಂ ನಗರದ ಗೃಹಸ್ಥನೊಬ್ಬನ ಮನೆಗೆ ಬೆಂಕಿ ಬಿದ್ದ ವಿಷಯವನ್ನು ಆದಿನವೇ ತನ್ನ ಕಣ್ಣೆದುರಿಗೆ ನಡೆಯುತ್ತಿರುವಂತೆ ವಿವರಿಸಿ ಹೇಳಿದ. ಮನೆಯಿದ್ದ ಬೀದಿ, ಮನೆಯ ನಂಬರು, ಮನೆಯ ಯಜಮಾನನ ವಿವರ, ಬೆಂಕಿ ಉರಿಯುತ್ತಿದ್ದ ಬಗ್ಗೆ ಎಲ್ಲವನ್ನೂ ಕಣ್ಣಿಗೆ ಕಟ್ಟಿದಂತೆ ತಿಳಿಸಿದ. ಈ ವಿಚಾರ ಮೂರು ನಾಲ್ಕು ದಿನಗಳ ನಂತರ ಖಚಿತವಾಗಿ ತಿಳಿಯಿತು. ಇಂಗ್ಲೆಂಡಿನ ಊರೊಂದರಲ್ಲಿ ಒಬ್ಬಾತನ ಹೆಂಡತಿ 1945 ನೇ ಇಸವಿ ನವಂಬರ್ 18 ರ ರಾತ್ರಿ ಯುದ್ಧಕ್ಕೆ ಹೋಗಿದ್ದ ತನ್ನ ಮಗ ಸತ್ತನೆಂದು ಗೋಳಾಡ ಹತ್ತಿದಳು. ಯಾರು ಎಷ್ಟು ಸಮಾಧಾನಪಡಿಸಿದರೂ ಆಕೆಯ ದುಃಖ ಶಮನವಾಗಲಿಲ್ಲ. ಆಕೆಗೆ ಹುಚ್ಚು ಹಿಡಿದಿದೆಯೆಂದು ಆಸ್ಪತ್ರೆಗೆ ಸೇರಿಸಿದರು. ಕೆಲವಾರು ದಿವಸಗಳಲ್ಲಿ ಯುದ್ಧರಂಗದಿಂದ ಅವರ ಮಗ ಸತ್ತನೆಂಬ ಸತ್ಯ ವಿಚಾರ ಟೆಲಿಗ್ರಾಂ ಮೂಲಕ ಬಂದು ತಲುಪಿತು. ಆಶ್ಚರ್ಯಕರ ಸಂಗತಿ ಎಂದರೆ ಆತನು ನವಂಬರ್ 17 ರಂದು ಹಠಾತ್ತಾಗಿ ತೀರಿಕೊಂಡಿದ್ದ. 18 ರಂದು ಈಕೆ ಗೋಳಾಟ ಪ್ರಾರಂಭವಾಯಿತು. ಇಂತಹ ಅನೇಕ ನಿದರ್ಶನಗಳು ವಿಶ್ವದಾದ್ಯಂತ ಸಿಗುತ್ತವೆ. ಭಾರತದಲ್ಲಂತೂ ವೇದ ಪುರಾಣಗಳ ಕಾಲದಿಂದಲೂ ಪ್ರತ್ಯಕ್ಷ ಪ್ರಮಾಣವಾಗಿ ಅನೇಕ ಉದಾಹರಣೆಗಳಿವೆ.

ಈ ಘಟನೆಗಳನ್ನೆಲ್ಲಾ ಪರಿಶೀಲಿಸಿದ ವಿಚಾರವಂತರು, ವಿದ್ಯಾವಂತರು, ವಿಜ್ಞಾನಿಗಳು ಯೋಚನೆ ಮಾಡಲು ಪ್ರಾರಂಭಿಸಿದರು. ಇವೆಲ್ಲವನ್ನು ಕಲ್ಪನೆಗಳೆಂದಾಗಲೀ, ಹುಚ್ಚರ ವರ್ತನೆಗಳೆಂದಾಗಲೀ ತಳ್ಳಿಹಾಕುವಂತಿರಲಿಲ್ಲ. 1884 ರಲ್ಲಿ ತತ್ವಶಾಸ್ತ್ರ ಮತ್ತು ಮನಶಾಸ್ತ್ರ ಪಂಡಿತನಾದ ವಿಲಿಯಂ ಜೇಮ್ಸ್ ಎಂಬುವನು ಈ ಬಗ್ಗೆ ಸಂಶೋಧನೆ ಮಾಡಲು ಅಮೆರಿಕಾದಲ್ಲಿ "ಅಭೌತಿಕ ಸಂಶೋಧನಾ ಸಂಸ್ಥೆ" ಸ್ಥಾಪಿಸಿದನು. ಸ್ಟಾನ್‌ಫರ್ಡ್ ಹಾಗೂ ಹಾರ್ವರ್ಡ್ ವಿಶ್ವವಿದ್ಯಾನಿಲಯಗಳಲ್ಲಿ ಈ ವಿಚಾರವಾಗಿ ಅಧ್ಯಯನ ಮಾಡಲು ಸೌಕರ್ಯ ಕಲ್ಪಿಸಿದರು, ಕೋಪನ್ ಹೇಗನ್‌ನಲ್ಲಿ ಅಭೌತಿಕ ಸಂಶೋಧಕರ ಮಹಾ ಸಮ್ಮೇಳನವನ್ನು ನಡೆಸಿ ತಮ್ಮ ತಮ್ಮ ಸಂಶೋಧನೆಗಳನ್ನು ಚರ್ಚಿಸಿದರು. 1927 ರಲ್ಲಿ ಅಮೆರಿಕಾದ ವಿಲಿಯಂ ಮೆಕ್ ಡೂಗಲ್ ಮತ್ತು ಜೆ. ಬಿ. ರೈನ್ ಎಂಬಿಬ್ಬರು ಮನ ಶಾಸ್ತ್ರಜ್ಞರು ಸಂಶೋಧನೆ ನಡೆಸಿ ಈ ಅಧ್ಯಯನಕ್ಕೆ ಶಾಸ್ತ್ರದ ಸ್ಥಾನ ಕಲ್ಪಿಸಿಕೊಟ್ಟರು. ಇವರು ಇಂತಹ ಅಭೌತಿಕ ಸಂಗತಿಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಿ ವಿವರಗಳನ್ನು ಪರಿಶೀಲಿಸಿ ಪ್ರಕಟಿಸಿದರು. ನ್ಯೂಯಾರ್ಕಿನಲ್ಲಿ "ಪರಾಮಾನಸ ಪ್ರತಿಷ್ಠಾನ" (Parapsychology Foundation) ಎಂಬ ಸಂಸ್ಥೆಯನ್ನೇ ಸ್ಥಾಪಿಸಿದರು. ಮಾನಸ ಶಾಸ್ತ್ರದಲ್ಲಿ ಹೊಸದೃಷ್ಟಿ

ಮೂಡಿತು. ಮನಸ್ಸಿನ ಮೂಲಭೂತ ಪ್ರವೃತ್ತಿಗಳ ಹಾಗೂ ಮಾನವ ವ್ಯಕ್ತಿತ್ವದ ಬಗ್ಗೆ ಹೊಸ.ಹೊಸ ವಿಚಾರ ಧಾರೆಗಳು ಬೆಳಕಿಗೆ ಬಂದವು. ಈಗ ಈವಿಚಾರದಲ್ಲಿ ಇಂಗ್ಲೆಂಡ್, ರಷ್ಯ, ಜರ್ಮನಿ, ನೆದರ್‌ಲ್ಯಾಂಡ್ಸ್ ಹಾಗೂ ಜೆಕೊಸ್ಲೋವಾಕಿಯಾಗಳಲ್ಲಿಯೂ ವಿಶೇಷ ಅಧ್ಯಯನ ಪರಿಶೋಧನೆ ನಡೆಯುತ್ತಿದೆ.

ಈಗ ಇಂದ್ರಿಯ ಗ್ರಾಹ್ಯ ಹಾಗೂ ಪ್ರಯೋಗಗಳಿಗೆ ಸಾಧ್ಯವಾದುದು ಮಾತ್ರ ಸತ್ಯವೆನ್ನುವ ನಿಲವು ಬದಲಾಗುತ್ತಿದೆ. ಆಧ್ಯಾತ್ಮ ಜೀವಿಗಳಿಗೆ ಈ ಜಗತ್ತು ಅನಿತ್ಯ, ಇಂದ್ರಿಯ ಗ್ರಾಹ್ಯ ವಿಷಯಗಳೆಲ್ಲವೂ ಭ್ರಮೆ. ಇಂತಹವರು ಅತೀಂದ್ರಿಯ ಸಾಮರ್ಥ್ಯ ಪಡೆದಿದ್ದರು. ಇವೆಲ್ಲವೂ ಸ್ವಚ್ಛ ಜೀವನದಿಂದ ಯೋಗಧ್ಯಾನಗಳಲ್ಲಿ ನಿರತರಾಗಿ ತಮ್ಮ ಮನಸ್ಸನ್ನು ತಪಸ್ಸಿನಲ್ಲಿ ಕೇಂದ್ರೀಕರಿಸಿದವರಿಗೆ ಅಂತಹ ಸಾಮರ್ಥ್ಯ ತಾನಾಗಿಯೇ ಲಭಿಸುತ್ತದೆ. ಮನ ಶಾಸ್ತ್ರಜ್ಞರೂ ಈ ಬಗ್ಗೆ ಅಧ್ಯಯನಮಾಡಿ ಇವೆಲ್ಲವೂ ಸಾಧ್ಯವೆಂಬುದರ ಬಗ್ಗೆ ಅರಿಯುತ್ತಿದ್ದಾರೆ. ಆಧ್ಯಾತ್ಮ ವಿಚಾರಗಳನೇಕವು ವೈಜ್ಞಾನಿಕ ಸಂಶೋಧನೆಯಲ್ಲಿ ನಿಜವೆಂದು ಗೊತ್ತಾಗುತ್ತಿದೆ.

ಪ್ರೊ॥ ಎಸ್. ಕೆ. ರಾಮಚಂದ್ರರಾವ್‌ರವರು ತಮ್ಮ ಅನುಭವದ ಹಿನ್ನೆಲೆಯಲ್ಲಿ ಈ ರೀತಿ ನುಡಿದಿದ್ದಾರೆ.

'ವಿಜ್ಞಾನವೆನ್ನುವುದು ಕೇವಲ ಒಂದು ಜ್ಞಾನ ಸಾಧನ" ಅದರ ಯೋಗ್ಯತೆಗೆ ತಕ್ಕಷ್ಟು, ಅದರ ಉಪಾಧಿಗಳಿಗೆ ಸಿಕ್ಕುವಷ್ಟು, ಅದರ ವ್ಯಾಪ್ತಿ ಇರುವಷ್ಟು ಮಾತ್ರ ವಿವರಗಳನ್ನು ಅದು ಗ್ರಹಿಸಬಲ್ಲದು, ಪಾತ್ರೆಯ ಗಾತ್ರದಷ್ಟು ನೀರನ್ನು ಅದರಲ್ಲಿ ತುಂಬ ಬಹುದು. ಆದರೆ ನದಿಯ ನೀರೆಲ್ಲಾ ಅಷ್ಟೇ ಎನ್ನಬಹುದೇ? ಅಳತೆಗೋಲು ಇದ್ದಂತೆ ಅಳತೆ ತಿಳಿಯುತ್ತದೆ. ಆದರೆ ಅಳತೆಗೆ ಅಳತೆಗೋಲನ್ನು ಅಳವಡಿಸಬೇಕಲ್ಲವೆ? ವಿಜ್ಞಾನ ಸದ್ಯದ ಪರಿಕರಗಳನ್ನು ಅವಲಂಬಿಸಿ ಪ್ರಪಂಚದ ವಿವರಗಳನ್ನು ತಿಳಿಯಲೆತ್ನಿಸುತ್ತದೆ. ಪರಿಕರಗಳ ಮಿತಿಯು ಜ್ಞಾನದ ಮಿತಿಯನ್ನು ನಿರ್ಧರಿಸುವುದು ಸಹಜ, ಅನಿವಾರ್ಯ. ಪರಿಕರಗಳ ನೆರವಿನಿಂದ ಒದಗಿದುದಷ್ಟೇ ಜ್ಞಾನ, ಅವುಗಳಿಗೆ ಮೀರಿದುದೆಲ್ಲಾ ಕಲ್ಪನೆ ಎನ್ನುವುದು ಸಲ್ಲದು" ಎಂಬುದಾಗಿ ವಿಜ್ಞಾನವೇ ಸರ್ವಸ್ವವೆನ್ನುವವರಿಗೆ ಕಿವಿ ಮಾತು ಹೇಳಿದ್ದಾರೆ. ಇದು ಎಲ್ಲರೂ ಒಪ್ಪಬಹುದಾದ ಅನುಭಾವಿಕ ವಿವರಣೆಯಲ್ಲವೆ?



# ಡಾ॥ ಬಸವರಾಜ ರಾಜಗುರು : ಒಂದು ನೆನಪು

ಎಸ್. ವಿ. ಮನ್ವಾಚಾರ್, ವ್ಯವಸ್ಥಾಪಕರು, ಕನ್ನಡ ಸಾಹಿತ್ಯ ಪರಿಷತ್,
ಚಾಮರಾಜ ಪೇಟೆ, ಬೆಂಗಳೂರು - 560 018.

ಖ್ಯಾತ ಹಿಂದೂಸ್ತಾನಿ ಗಾಯಕ ರಸಋಷಿ, ಪ್ರತಿಭೆಯ ಅಪೂರ್ವ ಸಂಗಮ, ಕರ್ನಾಟಕ ಸಂಗೀತದಲ್ಲೂ ಪರಿಶ್ರಮವನ್ನು ಪಡೆದಿದ್ದ ಸ್ವರ ಸಾಮ್ರಾಜ್ಯದ ಮಹಾ ಸಾಮ್ರಾಟ; ಸಂಗೀತವನ್ನೇ ಜೀವ ಪ್ರೇಮವೆಂದು ನಂಬಿದ್ದ ಪಂಡಿತ ಬಸವರಾಜ ರಾಜಗುರು ಅವರು ದಿನಾಂಕ 22.7.91 ರಂದು ನಿಧನರಾದರು. ಇದರಿಂದ ಕರ್ನಾಟಕದ ಮತ್ತೊಬ್ಬ ಖ್ಯಾತ ಸಂಗೀತಗಾರರು ಅಸ್ತಂಗತರಾದಂತಾಯಿತು.

ಸವಾಯಿ ಗಂಧರ್ವ, ಕುಮಾರ ಗಂಧರ್ವ, ಮಲ್ಲಿಕಾರ್ಜುನ ಮನ್ಸೂರ, ಭೀಮ-ಸೇನ ಜೋಷಿ, ಗಂಗೂಬಾಯಿ ಹಾನಗಲ್, ಬಸವರಾಜ ಮನ್ಸೂರ ಮುಂತಾದ ಸಂಗೀತ ವಿದ್ವಾಂಸರನ್ನು ದೇಶಕ್ಕೆ ಕೊಟ್ಟ ಕೀರ್ತಿ ಧಾರವಾಡ ಜಿಲ್ಲೆಯದು. ಡಾ॥ ಬಸವರಾಜ ರಾಜಗುರುಗಳು ಕೂಡ ಧಾರವಾಡ ಜಿಲ್ಲೆಯ ಕುಂದಗೋಳ ತಾಲ್ಲೂಕಿನ ಯಲಿವಾಳ ಗ್ರಾಮದಲ್ಲಿ 1920 ಆಗಸ್ಟ್ 20 ರಂದು ಜನಿಸಿದರು. ತಂದೆ ಮಹಂತಸ್ವಾಮಿ; ತಾಯಿ ರಾಚಮ್ಮ.

ತಂದೆ ಮಹಂತಸ್ವಾಮಿ ಹಾಗೂ ತಾತ ಸಿದ್ಧಯ್ಯಸ್ವಾಮಿರಾಜಗುರು ಅವರು ಕೂಡ ಕರ್ನಾಟಕ ಸಂಗೀತದಲ್ಲಿ ಸಾಕಷ್ಟು ಪರಿಶ್ರಮವನ್ನು ಹೊಂದಿದವರು. ಹೀಗೆ ಇವರ ಮನೆತನವೇ ಸಂಗೀತದಲ್ಲಿ ಪರಿಣತ ಮನೆತನ. ಸಂಗೀತದಲ್ಲಿ ಇವರಿಗೆ ತಂದೆಯೇ ಮೊದಲ ಗುರು. ಮನೆಯಲ್ಲೇ ತಂದೆಯಿಂದ ಕರ್ನಾಟಕ ಸಂಗೀತವನ್ನು ಅಭ್ಯಸಿಸಿದ ಬಸವರಾಜರು ತಮ್ಮ 10 ನೆಯ ವಯಸ್ಸಿನಲ್ಲೇ, ಅಂದಿನ ಖ್ಯಾತ ನಾಟಕ ಕಂಪನಿಯ ವಾಮನ ಮಾಸ್ತರರ ಹತ್ತಿರ ಸೇರಿಕೊಂಡರು. ಆಗಲೇ ಅಭಿಮಾನಿಗಳ ಹೃದಯವನ್ನೂ ಗೆದ್ದುಕೊಂಡಿದ್ದರು. ಬಸವರಾಜ ರಾಜಗುರು ಅವರ ಪೂರ್ವಜರು ಕೆಳದಿ ಅರಸರಿಗೆ ಸಂಗೀತದ ಗುರುಗಳಾಗಿದ್ದರೆಂದೂ ಅದ್ದರಿಂದಲೇ ಅವರಿಗೆ 'ರಾಜಗುರು' ಎಂದು ಹೆಸರು ಬಂದಿತೆಂದೂ ಮುಂದೆ ಅದೇ ಮನೆತನದ ಹೆಸರಾಯಿತೆಂದು ಹೇಳುವರು.

ಹುಬ್ಬಳ್ಳಿಯ ಮೂರುಸಾವಿರ ಮಠದಲ್ಲಿ ಸಂಸ್ಕೃತ ಅಭ್ಯಾಸವನ್ನು ಮಾಡಿದ ಇವರು ಹಿಂದೂಸ್ತಾನಿ ಸಂಗೀತದಲ್ಲಿ, ಕರ್ನಾಟಕದ ಕೀರ್ತಿಯನ್ನು ಗಗನದೆತ್ತರಕ್ಕೆ ಏರಿಸಿದ ಮಹಾನ್ ಗಾಯಕರಲ್ಲಿ ಬಸವರಾಜ ರಾಜಗುರು ಅವರೂ ಒಬ್ಬರು. 1930 ರಲ್ಲಿ ಗಾನಯೋಗಿ ಪಂಚಾಕ್ಷರಿ ಬುವಾ ಅವರು ಬಸವರಾಜ ರಾಜಗುರು ಅವರನ್ನು

ತಮ್ಮಲ್ಲಿಗೆ ಕರೆಸಿಕೊಂಡರು. ಇದು ಅವರ ಜೀವನದಲ್ಲಿಯ ಹೊಸ ತಿರುವೆಂದೇ ಹೇಳಬಹುದು. ಅಲ್ಲಿ ಅವರು ಹನ್ನೊಂದು ವರ್ಷಗಳ ಕಾಲ ಕರ್ನಾಟಕ ಸಂಗೀತ ಮತ್ತು ಹಿಂದೂಸ್ತಾನಿ ಸಂಗೀತವನ್ನು ಅಭ್ಯಸಿಸಿದರು. ಆದರೂ ಅವರ ಸಂಗೀತದ ಕಲಿಕೆಯ ದಾಹ ತೀರಲಿಲ್ಲ. ಅಲ್ಲಿಂದ ಅವರು ನೀಲಕಂಠ ಬುವಾಮಿರಜಕರ್, ಸವಾಯಿ-ಗಂಧರ್ವ, ಸುರೇಶಬಾಬು ಮಾನೆ, ಮುಬಾರಕ್ ಅಲಿ, ಇನಾಯುತ್ತುಲ್ಲಾಖಾನ್, ರೋಷನ್ ಅಲಿ, ಗೋವಿಂದರಾವ್ ತಂಬೆ, ಲಾಹೋರ್‌ನ ಅಬ್ದುಲ್ ವಹೀದ್ ಮುಂತಾದ ಸಂಗೀತ ವಿಚಾರದಲ್ಲಿ ಸಂಗೀತಾಭ್ಯಾಸವನ್ನು ಮಾಡಿ ವಿವಿಧ ಚೀಜಗಳಲ್ಲಿ ವಿದ್ವತ್ತನ್ನು ಪಡೆದುಕೊಂಡರು. ಇವರ ಗುರು ಪರಂಪರೆಯೇ ಇದೆ; ಅದು ಭಾರತ-ಪಾಕಿಸ್ತಾನಗಳೆರಡನ್ನೂ ಆವರಿಸಿಕೊಂಡಿದೆ. ಈ ರಾಜಗುರುಗಳು ಕೆಳದಿಯಿಂದ ಲಾಹೋರ್ ಕರಾಚಿಯವರೆಗೂ ಹೋಗಿ ಕಲಿತುಬಂದವರು.

ಬಸವರಾಜ ರಾಜಗುರು ಅವರ ಸಂಗೀತ ಪ್ರಕಾರವು ಎಂತಹವರನ್ನೂ ಬೆರಗುಗೊಳಿಸುವಂತಹದು. ವೈವಿಧ್ಯಕ್ಕೆ ಹೆಸರಾದ ರಾಜಗುರು ಅವರದು ಬಹುಶ್ರುತತ್ವ. ಕಳವಳ ಕ್ಯಾವ್, ದ್ರುಪದ, ಧಮರ್, ತುಮುರಿ, ಲಿಂಕ, ಕನ್ನಡ-ಮರಾಠಿ ನಾಟ್ಯಗೀತೆಗಳು ಭಾವಗೀತೆಗಳು, ಭಜನೆ ವಚನಭಕ್ತಿ ಗೀತೆಗಳುಹಾಗೂ ಜನಪದ ಗೀತೆಗಳನ್ನು ಸುಶ್ರಾವ್ಯವಾಗಿ ಶ್ರೋತೃಗಳ ಮನ ಮೆಚ್ಚುವಂತೆ ಹಾಡುತ್ತಿದ್ದರು. 'ಚೀಜಗಳ ಮಹಾರಾಜ'ನೆಂದೇ ಹೆಸರಾದ ಇವರ ಸಂಗೀತ ಭಂಡಾರದಲ್ಲಿ ಹನ್ನೆರಡುಸಾವಿರ ಚೀಜಗಳಿದ್ದವು. ಎಲ್ಲದರಲ್ಲೂ ಡಾ॥ ಬಸವರಾಜ ರಾಜಗುರು ಅವರದು ವಿಶಿಷ್ಟವಾದ ಹೆಜ್ಜೆಗುರುತು. ಈ ಎಲ್ಲ ಸಾಧನೆಯು ಒಂದೇ ಉಸುರಿಗೆ ಬಂದದ್ದಲ್ಲ; ಇದರ ಹಿಂದೆ ಅವರ 27 ವರ್ಷಗಳ ಸಾಧನೆಯಿದೆ ಎಂಬುದು ಗಮನಾರ್ಹ.

1936 ರಲ್ಲಿ ಹಂಪೆಯಲ್ಲಿ ಆಚರಿಸಿದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಆರನೆಯ ಶತಮಾನೋತ್ಸವ ಸಮಾರಂಭದ ಸಂದರ್ಭದಲ್ಲಿ ಮೊಟ್ಟ ಮೊದಲ ಬಾರಿಗೆ ಇವರ ಪ್ರತಿಭೆಯ ಪ್ರದರ್ಶನವಾಯಿತು. ಆ ಸಮಾರಂಭದಲ್ಲಿ ಸುಮಾರು ಹದಿನೈದು ಸಾವಿರ ಶ್ರೋತೃಗಳು ಹಾಜರಿದ್ದು ಗಾಯನವನ್ನು ಆಲಿಸಿದರು. ಆಗಲೇ ಅವರು ಹಿಂದೂಸ್ತಾನಿ ಸಂಗೀತದ ಹಿರಿಯ ಗಾಯಕರ ಸಾಲಿಗೆ ಸೇರಿದ್ದು; ಮತ್ತೆಂದೂ ಅವರು ಹಿಂದಿರುಗಿ ನೋಡಲಿಲ್ಲ. 18 ರಿಂದ 21 ನೆಯ ವಯಸ್ಸಿನ ಅವಧಿಯಲ್ಲಿ ಹಲವು ಧ್ವನಿ ಮುದ್ರಿಕೆಗಳನ್ನ ಹೊರತಂದು ಶ್ಯಾಮಕಲ್ಯಾಣ, ದೇಶಿ, ಮಾಲಕಂಸ, ಪೀಘೆ, ಚಾಂದನಿ, ಕೇದಾರ, ಹಂಸಧ್ವನಿ – ಮುಂತಾದ ರಾಗಗಳನ್ನು ಇವರ ಬಾಯಿಂದ ಕೇಳುವುದು ರಸಿಕರಿಗೊಂದು ರಸದೌತಣ. ಬಸವರಾಜರ ಗಾಯನದಲ್ಲಿ ಕಿರಾನಾ, ಗ್ವಾಲಿಯರ ಹಾಗೂ ಪಾಟಿಯಾಲಾ ಘರಾಣಾಗಳ ತ್ರಿವೇಣಿ ಸಂಗಮವನ್ನು ಹಲವು ಸಂಗೀತ ವಿದ್ವಾಂಸರು ಗುರುತಿಸಿದ್ದಾರೆ,



ಬಸವಣ್ಣನವರ ಅನೇಕ ವಚನಗಳನ್ನು ರಾಗ-ಭಾವ ತುಂಬಿ ಹಾಡಿ ಮನೆ ಮಾತಾಗಿದ್ದಾರೆ. ಅವರು ಹಾಡಿದ ಜನಪ್ರಿಯ ವಚನಗಳು - 'ಅತ್ತಲಿತ್ತ ಹೋಗದಂತೆ, 'ಮಡಕೆಯ ಮಾಡುವರೆ' 'ಚಕೋರಂಗೆ ಚಂದ್ರಮನ', ವಚನದಲ್ಲಿ ನಾಮಾಮೃತ ತುಂಬಿ' ಮುಂತಾದವುಗಳು. ಬಸವಣ್ಣನವರ 'ಪರಚಿಂತೆ ಈಗ ಏಕೆ ಅಯ್ಯ' ಎಂಬ ಹಾಡನ್ನು ಹಾಡಿ ಇವರು ಸಂಗೀತದ ಉಸಾಬರಿಯನ್ನುಳಿದು ಬೇರೆ ಯಾವ ಉಸಾಬರಿಗೂ ಹೋದವರಲ್ಲ.

ಅತ್ಯುತ್ತಮ ವಾಗ್ಮಿಗಳಾದ ಬಸವರಾಜ ರಾಜಗುರು ಅವರು ಮುಚ್ಚುಮರೆಯಿಲ್ಲದೆ, ತೆರೆದ ಮನಸ್ಸಿನ, ಬಿಚ್ಚು ಹೃದಯದ ಮಾತುಗಾರರು. ಲಾಹೋರ್, ಅಮೃತಸರ, ದೆಹಲಿ, ಆಗ್ರಾ, ಗ್ವಾಲಿಯರ್–ಅಲ್ಲದೆ, ದೇಶದಾದ್ಯಂತ ಅಭಿಮಾನಿ ಶ್ರೋತೃಗಳನ್ನು ಹೊಂದಿದ್ದರು. ಇವರು ಹೋದೆಡೆಯಲ್ಲೆಲ್ಲ ಶಹಭಾಸು ಗಿರಿಯನ್ನು ಪಡೆದುಕೊಂಡವರು. ಬಸವರಾಜ ರಾಜಗುರು ಅವರ ಸಂಗೀತವನ್ನು – ವಿನಯ್ ಕರಾವ್, ಪಟವರ್ಧನ, ಹೀರಾಬಾಯಿ ಬಡೋಡ್‌ಕರ್, ಅಬ್ದುಲ್ ಕರೀಮಖಾನ್, ಸವಾಯಿ ಗಂಧರ್ವ - ಮುಂತಾದ ಅತಿರಥ-ಗಾಯಕರಿಂದ 'ಭಲೆ' ಎನ್ನಿಸಿಕೊಂಡ ಕನ್ನಡದ ಹೆಮ್ಮೆಯ ಸಂಗೀತ ಸಾಧಕರು.

ದೂರದರ್ಶನದ ರಾಷ್ಟ್ರೀಯ ಕಾರ್ಯಕ್ರಮದಲ್ಲಿ ಹದಿನೈದಕ್ಕೂ ಹೆಚ್ಚು ಬಾರಿ ಇವರ ಕಾರ್ಯಕ್ರಮಗಳು ಬಿತ್ತರಗೊಂಡಿವೆ ಅಲ್ಲದೆ ಮದರಾಸು, ಮುಂಬೈ, ದೂರದರ್ಶನ ಕೇಂದ್ರಗಳಲ್ಲೂ ಹಲವಾರು ಬಾರಿ ಕಾರ್ಯಕ್ರಮಗಳನ್ನು ಕೊಟ್ಟು ಖ್ಯಾತನಾಮರಾಗಿದ್ದಾರೆ. ಇವರೇ ಒಂದು ಕಡೆ ಹೇಳಿದಂತೆ "ಮರಾಠಿಯವರು ನನಗೆ ಹೆಚ್ಚು ಪ್ರೋತ್ಸಾಹವನ್ನು ನೀಡಿದರು", ಅಲ್ಲದೆ ಇವರು ಹಲವಾರು ಸಂಘ ಸಂಸ್ಥೆಗಳಲ್ಲಿ ಸೇವೆಯನ್ನು ಸಲ್ಲಿಸಿರುವರು. ಕರ್ನಾಟಕ ರಾಜ್ಯ ಸಂಗೀತ ಮತ್ತು ನಾಟಕ ಅಕಾಡೆಮಿ ಸದಸ್ಯರಾಗಿ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಗೌರವ ಪ್ರಾಧ್ಯಾಪಕರಾಗಿ ದುಡಿದಿದ್ದಾರೆ.

ಇವರು ಎಂದೂ ಪ್ರಶಸ್ತಿಗಾಗಿ ಹಾಡಿದವರಲ್ಲ: ಪ್ರಶಸ್ತಿಯನ್ನು ಬೆನ್ನುಹತ್ತಿ ಹೋದವರಲ್ಲ. ಇವರಿಗೆ ಸಂದ ಯಾವ ಪ್ರಶಸ್ತಿಯೂ ಹೆಚ್ಚಿನದೆನಿಸುವುದಿಲ್ಲ. ಆದರೆ ಇವರಿಗೆ ಬಂದ ಪ್ರಶಸ್ತಿಗಳು ಹಲವಾರು. ಭಾರತ ಸರ್ಕಾರವು ಈ ಸಂಗೀತ ಸಾಮ್ರಾಟನನ್ನು ಗೌರವಿಸಿ "ಪದ್ಮಶ್ರೀ" ಪ್ರಶಸ್ತಿಯನ್ನು ಪ್ರದಾನ ಮಾಡಿದೆ. ಕರ್ನಾಟಕ ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ಪದವಿಯನ್ನು ನೀಡಿದೆ. 1982ರಲ್ಲಿ ಕೇಂದ್ರ ಸಂಗೀತ ನಾಟಕ ಅಕಾಡೆಮಿಯು ಪ್ರಶಸ್ತಿ ನೀಡಿ ಸನ್ಮಾನಿಸಿದೆ. ಹಲವಾರು ಸಂಘ ಸಂಸ್ಥೆಗಳು, ಮಠ ಮಾನ್ಯರುಗಳು ಇವರನ್ನು ಅಭಿನಂದಿಸಿ–ಸಂಗಿತ ರತ್ನ, ಸಂಗೀತ ಸುಧಾಕರ,

ಅಭಿನವ ಗಂಧರ್ವ, ಸ್ವರ ಸಾಮ್ರಾಜ್ಯದ ಮಹಾಸಾಮ್ರಾಟ ಎಂಬ ಬಿರುದುಗಳನ್ನು ನೀಡಿ ಗೌರವಿಸಿವೆ. ಹಿಂದೂಸ್ತಾನಿ ಸಂಗೀತದ ಹಾಡುಗಾರರ ರಾಷ್ಟ್ರೀಯ ಪ್ರಶಸ್ತಿಯೂ ಇವರಿಗೆ ದೊರೆತಿದೆ.

ಹಿಂದೂಸ್ಥಾನಿ ಸಂಗೀತ ಜಗತ್ತಿನ ಮಹಾನ್ ಪಂಡಿತ ಬೇಗಂ ಅಖ್ತರ್ ಅವರು ರಾಜಗುರು ಅವರನ್ನು 'ಸ್ವರ ಸಾಮ್ರಾಜ್ಯದ ಮಹಾಸಾಮ್ರಾಟ' (ಸೂರಕಾ ಬಾದಶಾಹ) ಎಂದು ಕರೆದಿದ್ದರು. ಆಗಿನ ಸಮಾಚಾರ ಮತ್ತು ಆಕಾಶವಾಣಿ ಮಂತ್ರಿ ಬಾಳಕೃಷ್ಣ ಕೇಸರರು ರಾಜಗುರು ಅವರನ್ನು 'ಹುಕುಮಿಯಕ್ಕಾ" ಎಂದು ಹೇಳಿದ್ದರು. ಆದರೆ ಈ ಸಾಮ್ರಾಟನ ಕೊನೆಯ ದಿನಗಳು ಕಠೋರವಾಗಿದ್ದವು. ವಿದೇಶದಲ್ಲಿ ಸಂಗೀತ ಕಾರ್ಯಕ್ರಮವನ್ನು ಏರ್ಪಡಿಸುವ ಸಲುವಾಗಿ ಬೆಂಗಳೂರಿಗೆ ಬಂದು ಅಲ್ಲೇ ಸಿಧನರಾದರು. ಕನ್ನಡಿಗರು ತಮ್ಮನ್ನು ಪ್ರೋತ್ಸಾಹಿಸಲಿಲ್ಲ ಅನ್ನುವ ನೋವು ಕೊನೆಯವರೆಗೂ ನೋವಾಗೇ ಉಳಿಯಿತು. ಈ ನೋವಿನ ನಿವಾರಣೆಗಾಗಿಯಾದರೂ ಕರ್ನಾಟಕ ಸರ್ಕಾರವು ಧಾರವಾಡದಲ್ಲಿನ ಡಾ॥ ರಾಜಗುರು ಸಂಗೀತ ಸಭಾ ಸಂಸ್ಥೆಯನ್ನು ಅಂತರಾಷ್ಟ್ರೀಯ ಮಟ್ಟದ ಸಂಗೀತ ಅಧ್ಯಯನ ಕೇಂದ್ರವನ್ನಾಗಿ ಮಾಡಿ, ಕರ್ನಾಟಕಕ್ಕೆ ಹೆಮ್ಮೆಯನ್ನು ತಂದುಕೊಟ್ಟ ಈ ಸಂಗೀತ ಸಾಮ್ರಾಟನ ಹೆಸರನ್ನು ಶಾಶ್ವತವಾಗಿ ಉಳಿಯುವಂತೆ ಮಾಡಬೇಕು. ಬಸವರಾಜ ರಾಜಗುರು ಕರ್ನಾಟಕದವರು ಎನ್ನುವುದು ಕನ್ನಡಿಗರಿಗೆ, ಕರ್ನಾಟಕಕ್ಕೆ ಹೆಮ್ಮೆಯ ಕೋಡು ಮೂಡಿಸುವ ಸಂಗತಿ.





## ಕನ್ನಡ ಕಣ್ಮಣಿ ಡಾ॥ ಎಂ. ಚಿದಾನಂದಮೂರ್ತಿ

ಕವಿತಾಕೃಷ್ಣ. ಅಧ್ಯಕ್ಷರು, ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ತುಮಕೂರು.

ಕನ್ನಡ ಸಾಹಿತ್ಯ ರಚಿಸುತ್ತಾ ಮುನ್ನಡೆ ಸಾಧಿಸಿದವರು ಬಹಳ ಮಂದಿ. ಆದರೆ ಕನ್ನಡ ಕಟ್ಟುವ ಕಾರ್ಯದಲ್ಲಿ ಮುನ್ನಡೆ ಸಾಧಿಸಿದವರು ಬಹಳ ವಿರಳ. ಆದರೆ ಸಾಹಿತ್ಯ ಸೇವೆಯೊಂದಿಗೆ ಕನ್ನಡ ಕಟ್ಟುವ ಕಾರ್ಯದಲ್ಲಿ ತಮ್ಮನ್ನು ತಾವೇ ಸಮರ್ಪಿಸಿಕೊಂಡವರಲ್ಲಿ ಡಾ॥ ಚಿದಾನಂದಮೂರ್ತಿ ಅವರು ಪ್ರಧಾನವಾಗಿ ಕಾಣುತ್ತಾರೆ. ಎಂ.ಸಿ.ಎಂ, ಚಿ.ಮೂ ಮುಂತಾದ ಸಂಕ್ಷಿಪ್ತ ನಾಮಗಳಿಂದ ಕನ್ನಡನಾಡಿಗೆ ಚಿರಪರಿಚಿತರಾಗಿರುವ ಇವರು ನಾಲ್ಕು ದಶಕಗಳಿಂದಲೂ ಕನ್ನಡ ನಾಡು ನುಡಿ, ಗಡಿ, ಗುಡಿ, ನೆಲ, ಜಲಗಳ ಬಗ್ಗೆ ಜನ ಜಾಗೃತಿ ಮೂಡಿಸುತ್ತಾ ಬಂದು ನಾಡಿನ ಓರ್ವ ದೊಡ್ಡ ವ್ಯಕ್ತಿ ಗಳೆನಿಸಿದ್ದಾರೆ. ಭಾಷಾಶಸ್ತ್ರದ ಬಗೆಗೆ, ಶಾಸನ ಶಾಸ್ತ್ರದ ಬಗೆಗೆ, ಸಾಹಿತ್ಯದ ಬಗೆಗೆ, ಸಂಶೋಧನೆ ಬಗೆಗೆ ಇವರು ಗೈದಿರುವ ಸೇವೆ ಅನಂತವಾದುದು, ಇನ್ನು ಕನ್ನಡ ಸಂಸ್ಕೃತಿಯ ಉಳಿವಿಗಾಗಿ ಗೈದ ಸೇವೆ, ಚಳವಳಿ ತುಂಬಾ ಗಮನಾರ್ಹವಾದುದು.

ಚಿ ಮೂ. ಅವರು 1931ನೆಯ ಇಸವಿ ಮೇ ಮಾಹೆ 10ರಂದು ಶಿವಮೊಗ್ಗ ಜಿಲ್ಲೆಯ ಹಿರೇಕೋಗಲೂರಿನಲ್ಲಿ ಜನಿಸಿದರು. ತಂದೆ ಕೊಟ್ಟೇರಯ್ಯ, ತಾಯಿ ಪಾರ್ವತಮ್ಮ. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಸಂಶೋಧನ ಕ್ಷೇತ್ರದಲ್ಲಿ ಇವರದು ದೊಡ್ಡ ಹೆಸರು ೨೦೦ಕ್ಕೂ ಹೆಚ್ಚಿನ ಅಮೂಲ್ಯವಾದ ಸಂಶೋಧನ ಲೇಖನಗಳನ್ನು ಬರೆದಿದ್ದಾರೆ. ಭಾಷಾವಿಜ್ಞಾನ, ಶಾಸನ ಶಾಸ್ತ್ರ, ಸಂಸ್ಕೃತಿ ಕ್ಷೇತ್ರಗಳಿಗೆ ಇವರು ಕೊಟ್ಟಿರುವ ಕೊಡುಗೆ ಅತ್ಯಮೂಲ್ಯವಾದದ್ದು. ಇವರ ಸಂಶೋಧನ ತರಂಗ, ಪೂರ್ಣ ಸೂರ್ಯಗ್ರಹಣ ಕೃತಿಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭ್ಯವಾಗಿದೆ. ಭಾಷಾವಿಜ್ಞಾನದ ಮೂಲತತ್ವಗಳು ಎಂಬ ಕೃತಿಯಾಗಿದ್ದು ದೇವರಾಜ ಬಹದ್ದೂರು ಪ್ರಶಸ್ತಿ ಲಭಿಸಿವೆ.

ಚಿ ಮೂ ಅವರು 'ಮಾತು ಮಿತವಾಗಿರಬೇಕು. ಕಾರ್ಯ ಉಗ್ರವಾಗಿರಬೇಕು' ಎಂಬವಾಣಿಗೆ ಉದಾಹರಣೆಯಂತಿದ್ದಾರೆ. ಕನ್ನಡ ನಾಡು - ನುಡಿಗೆ ಅಡಿಗಡಿಗೆ ಪೆಟ್ಟು ಬೀಳುತ್ತಿರುವುದನ್ನು ಕಂಡು ಕೇವಲ ವಿಷಾದ ವ್ಯಕ್ತಪಡಿಸದೆ, ಪರಿಹಾರ ಕಂಡು ಹಿಡಿಯಲು ಜಾಗೃತವಾದ ಚಿಕಿತ್ಸಕ ಬುದ್ಧಿ ಅವರದಾಗಿದೆ. ಬೀದರ್‌ನ ಜನತೆಗೆ ಪಂಜಾಬಿ ವಿದ್ಯಾರ್ಥಿಗಳಿಂದ ಆಗುತ್ತಿದ್ದ ಅನ್ಯಾಯವನ್ನು ಸ್ವಯಂ ಪರಿಶೀಲಿಸಿ, ಕಿಡಿಕಾರಿದ ಮೊದಲ ಸಾಹಿತಿ ಇವರು. ಅಲ್ಲಿನ ಅನ್ಯಾಯವನ್ನು ನಿರ್ಭೀತಿಯಿಂದ ಬಯಲಿಗೆಳದ ಮಹಾನ್ ಧೀರ. ಪ್ರತಿಯಾಗಿ ಬಾಂಬ್ ಹಾಕಿ ಕುಟುಂಬ ನಾಶಪ

ಡಿಸುವ ಬೆದರಿಕೆ ಪತ್ರ ಬಂದಾಗ ಹೆದರದೆ, ಕರ್ತವ್ಯ ಭ್ರಷ್ಟರಾಗದೆ ಅವರು ತೋರಿದ ಧೈರ್ಯ ಅಸಾಧಾರಣವಾದುದು. ಕನ್ನಡನಾಡಿನಲ್ಲಿ ಕನ್ನಡಿಗರು ನಿರುದ್ಯೋಗಿಗಳಾಗುತ್ತಿರುವುದನ್ನು ಕಂಡು ಸರೋಜಿನಿ ಮಹಿಷಿ ವರದಿಯನ್ನು ಯಥಾವತ್ತಾಗಿ ಜಾರಿಗೊಳಿಸಬೇಕೆಂದು ಹೋರಾಡಿದ ಅವರ ಕಳಕಳಿ ಅನುಕರಣೀಯ ಅಪೇಕ್ಷಣೀಯ.

ಗೋಕಾಕ್ ಚಳುವಳಿ ಕಾಲದಲ್ಲಿ ಪ್ರಧಾನ ಪಾತ್ರವಹಿಸಿದ ಚಿ.ಮೂ. ಅವರ ಎದೆಗಾರಿಕೆ ಮೆಚ್ಚುವಂತದು. ಕನ್ನಡ ಚಳುವಳಿಯಲ್ಲಿ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಂಡು ಶವನಿದ್ದೆಯಲ್ಲಿರುವ ಕನ್ನಡಿಗರನ್ನು ಅವರು ಎಚ್ಚರಗೊಳಿಸಿದ ರೀತಿ, ಪ್ರಾಚೀನ ಕನ್ನಡ ಸಂಸ್ಕೃತಿಯನ್ನು ಪರಿಚಯ ಮಾಡಿಕೊಟ್ಟ ರೀತಿ ಸುವರ್ಣಾಕ್ಷರಗಳಲ್ಲಿ ಬರೆದಿಡುವಂತದ್ದು. ಕನ್ನಡ ಶಕ್ತಿ ಕೇಂದ್ರವನ್ನು ಪ್ರಾರಂಭಿಸಿ ತನ್ಮೂಲಕ ಅವರು ಕನ್ನಡಿಗರನ್ನು ಜಾಗೃತಗೊಳಿಸಿದ ತ್ರಿವಿಕ್ರಮ ಶಕ್ತಿ ಬೆಕ್ಕಸಬೆರಗಾಗಿಸುವಂತದ್ದು. ಅವರ ಈ ಸದ್ಗುಣ, ಕನ್ನಡ ಪ್ರೇಮ, ಕನ್ನಡ ಕಟ್ಟುವ ಕಾರ್ಯಕ್ಕೆ ಕನ್ನಡದ ಅಸಂಖ್ಯಾತ ಕವಿಗಳೆಲ್ಲರೂ ದನಿಗೂಡಿಸಿದಲ್ಲಿ ಇರುವ ಸಮಸ್ಯೆಗಳೆಲ್ಲಾ ಒಂದೇ ಕ್ಷಣದಲ್ಲಿ ಪರಿಹಾರವಾಗುವ ಕಾಲ ದೂರವಿರುವುದಿಲ್ಲ.

ಚಿದಾನಂದ ಮೂರ್ತಿ ಪ್ರತಿಭಾ ಸಂಪನ್ನರು. ಅವರ ವೀರಗಲ್ಲು, ಮಾಸ್ತಿಗಲ್ಲು ವಾಗರ್ಥ, ಗ್ರಾಮೀಣ, ಬಸವಣ್ಣ, ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅದರ ಅಸ್ಪೃಶ್ಯತೆ, ವಚನಸಾಹಿತ್ಯ ಈ ಮುಂತಾದ ಕೃತಿಗಳು ಮೌಲ್ಯಯುತ ಕೃತಿಗಳಾಗಿ, ಹಿರಿಯ ಕೊಡುಗೆಗಳಾಗಿವೆ. ಸ್ಟಾನ್‌ಫೋರ್ಡ್‌ನಲ್ಲಿ ವಿಶ್ವ ವಿದ್ಯಾನಿಲಯದಲ್ಲಿ ಜರುಗಿದ ೪ನೇ ಅಂತರಾಷ್ಟ್ರೀಯ ಐತಿಹಾಸಿಕ ಭಾಷಾ ವಿಜ್ಞಾನ ಸಮ್ಮೇಳನ ಅಧ್ಯಕ್ಷತೆ ವಹಿಸಿದ ಕೀರ್ತಿ ಇವರದಾಗಿ ೧೯೮೩-೮೪ ರಲ್ಲಿ ತಿರುವನಂತಪುರ ದ್ರಾವಿಡ ಭಾಷಾವಿಜ್ಞಾನ ಸಂಸ್ಥೆಯ ಅಧ್ಯಕ್ಷರಾದರು. 1984 ರಲ್ಲಿ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಇತ್ತು ಪುರಸ್ಕರಿಸಿವೆ.

ಶ್ರೀಯುತರು ಕರ್ನಾಟಕದ ಬಗ್ಗೆ ಅಧಿಕೃತವಾಗಿ ಮಾತನಾಡಬಲ್ಲ ಆಕಾರ ವ್ಯಕ್ತಿಯಾಗಿದ್ದಾರೆ. ಯಾವ ಚಾರಿತ್ರಿಕ ಅಂಶಗಳನ್ನು ನಿಂತಲ್ಲಿಯೇ ವಿವರವಾಗಿ ಹೇಳಬಲ್ಲರು. ಅವರಿಗಿರುವ ಕನ್ನಡ ಪ್ರೇಮ ಬೆಲೆ ಕಟ್ಟಲಾಗದಂತದ್ದು. ಕನ್ನಡಿಗರು ಕನ್ನಡ ಸಂಸ್ಕೃತಿಯಿಂದ, ಕನ್ನಡ ಭಾಷೆಯಿಂದ ದೂರಾಗುತ್ತಿರುವುದು ಕಂಡು ಚಿ.ಮೂ. ತುಂಬಾನೊಂದಿದ್ದಾರೆ. ಈ ಬಗ್ಗೆ ಸರ್ಕಾರದ ಅನಾದರ ಕಂಡು ಕನ್ನಡ ಪ್ರೇಮಿಗಳಿಗೆ ಹೆಮ್ಮೆಯಾಗದಿರದು. ನಾಡಿನ ಕಣ್ಮಣಿಯಂತಿರುವ ಚಿ ಮೂ. ಅವರಿಗೆ ೬೦ ವಸಂತಗಳು. ಅಭಿಮಾನಿಗಳು ಗೌರವಿಸಿ ದೊಡ್ಡತನ ತೋರಿದ್ದಾರೆ. ಈ ಶುಭ ಸಂದರ್ಭದಲ್ಲಿ ಕನ್ನಡ ಕಣ್ಮಣಿ ಚಿದಾನಂದ ಮೂರ್ತಿಗಳಿಗೆ ಹಾರ್ದಿಕ ಶುಭಾಶಯಗಳು.

ಸಿದ್ಧಗಂಗಾ



# ಹಲವು ಕೈಗಾರಿಕೆಗಳಿಗೆ ಗ್ಲಿಸರಿನ್

ಪ. ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಮಚ್ಚಿನ – 574 295, ದಕ್ಷಿಣ ಕನ್ನಡ

ಪ್ರಾಣಿ ಮತ್ತು ಸಸ್ಯಗಳಲ್ಲಿರುವ ಮೇದಸ್ಸನ್ನು ಪ್ರತ್ಯಾಮ್ಲಗಳೊಂದಿಗೆ ರಾಸಾಯನಿಕ ಕ್ರಿಯೆಗೊಳಪಡಿಸಿ, ಕಡಾಯಿಯಲ್ಲಿ ತುಂಬಿಸಿ ಉರಿಯ ಮೇಲಿಟ್ಟು ಕಲಕುವಾಗ ಕೆಳಪದರದಲ್ಲಿ ಸಾಬೂನು ಮತ್ತು ಮೇಲ್ಪದರದಲ್ಲಿ ಶೇ. ೧೦ ಅಂಶ ದ್ರವರೂಪಿ ರಾಸಾಯನಿಕವೊಂದು ತೇಲುತ್ತದೆ. ಇದಕ್ಕೆ ವಾಸನೆ ಇಲ್ಲ; ಬಣ್ಣವೂ ಇಲ್ಲ. ಆದರೆ ಸಕ್ಕರೆಗಿಂತ ಸಿಹಿ, ರುಚಿಯಿರುವಕಾರಣ ಗ್ರೀಕ್ ವಿಜ್ಞಾನಿ ಮೈಕೆಲ್ ಚರ್ವಲ್ ಅದನ್ನು ಗ್ಲೈಕಸ್ ಎಂದು ಕರೆದ. ಈ ಹೆಸರಿನ ಅರ್ಥ ಸಿಹಿ ಎಂದು. ಈ ರಸಾಯನಿಕವನ್ನು ವಿಜ್ಞಾನಿ ಕಾರ್ಲ್‌ವಿಲ್‌ಲ್ಮ್ ಶೀಲೆ ಅದಕ್ಕೆ ಒಲುಸನ್ ಎಂದು ಹೆಸರಿಸಿದ. ಮುಂದೆ ಆ ಹೆಸರು ಗ್ಲಿಸರಿನ್ ಎಂದು ಬದಲಾಯಿತು.

ದ್ರವರೂಪದ ಗ್ಲಿಸರೀನ್ ಮದ್ಯಸಾರ ಮತ್ತು ನೀರಿನೊಂದಿಗೆ ಎಲ್ಲಾ ರೂಪದಲ್ಲೂ ಸೇರುವುದಾದರೂ ಅತ್ಯಲ್ಪ ಉಷ್ಣದಲ್ಲೂ ಸಕ್ಕರೆ ಹರಳಿನಂತೆ ಗಟ್ಟಿಯಾಗುತ್ತದೆ. ಪೆಟ್ರೋಲಿಯಂ ಕೈಗಾರಿಕೆಗಳಲ್ಲಿ ಸಿಗುವ ರಾಸಾಯನಿಕ ಪದಾರ್ಥದಿಂದ ಗ್ಲಿಸರಿನ್ ಉತ್ಪಾದಿಸಲು ಅಮೇರಿಕಾ ೪ ದಶಕಗಳ ಹಿಂದೆ ಶೋಧಿಸಿತು. ೧೮೫೮ ರಲ್ಲಿ ಲೂಯಿ ಪಾಶ್ಚರ್ ತೋರಿಸಿಕೊಟ್ಟ ಪ್ರಕಾರ ಹುಳಿಬಂದ ಮಧ್ಯದಿಂದ ಜರ್ಮನ್‌ರು ಗ್ಲಿಸರಿನ್ ತೆಗೆಯಲಾರಂಭಿಸಿದರು. ಸಕ್ಕರೆ ಮತ್ತು ಪಿಷ್ಟಗಳನ್ನು ಹುಳಿಬರಿಸಿ ಆ ದ್ರಾವಕದಿಂದಲೂ ಇದನ್ನೂ ಪಡೆಯಲಾಗುತ್ತದೆ.

ಹೀಗೆ ಪಡೆಯುವ ಗ್ಲಿಸರಿನ್ ೫೦ ಕ್ಕಿಂತ ಹೆಚ್ಚಿನ ಕೈಗಾರಿಕೆಗಳಲ್ಲಿ ಬಳಸಲ್ಪಡುತ್ತಿದೆ. ಹರಳೆಣ್ಣೆಯಂತೆ ಜಿಡ್ಡಾಗಿರುವ ಇದನ್ನು ಗಾಳಿಗೆ ತೆರೆದಿಟ್ಟರೆ ಜಲಾಂಶವನ್ನು ಹೀರಿಕೊಳ್ಳುವುದು. ಚರ್ಮದ ಮೇಲೆ ಲೇಪಿಸಿದರೆ ಬಿಸಿಯಾದ ಅನುಭವ ನೀಡಿ ಜೀವಕೋಶಗಳ ನೀರನ್ನು ಹೀರಿಕೊಳ್ಳುವುದಲ್ಲದೆ ಚರ್ಮದ ಉರಿಯನ್ನು ತಗ್ಗಿಸಿ ಚಳಿಗಾಲದಲ್ಲಿ ಒಡೆಯದಂತೆ ರಕ್ಷಿಸುವುದು. ಆದ್ದರಿಂದ ವ್ಯಾಸಲೀನ್ ತಯಾರಿಕೆಯಲ್ಲಿ ಗ್ಲಿಸರಿನ್ ಅಗತ್ಯ. ಮುಖಕಾಂತಿ ಹೆಚ್ಚಿಸಿ, ಚರ್ಮದ ಮೊಡವೆ, ಇನ್ನಿತರ ಕಜ್ಜಿ ಕಲೆಗಳನ್ನು ಮಾಯವಾಗಿಸಿ ಚರ್ಮವನ್ನು ಕೋಮಲವಾಗಿರಿಸುವ ಲೇಪನಗಳಲ್ಲೂ ಇದನ್ನು ಬೆರೆಸುತ್ತಾರೆ. ಗ್ಲಿಸರಿನ್ ಬೆರೆತ ನೀರಿನಲ್ಲಿ ಬಾಯಿ ಮುಕ್ಕಳಿಸಿದರೆ ಶರೀರಕ್ಕೂ ಆರೋಗ್ಯಕರ. ಅದರ ಲೇಪನದಿಂದ ಸೊಳ್ಳೆಗಳನ್ನು ದೂರವಿಡಬಹುದು. ಕಾಲು, ಕೈಗಳ ಸಿಡಿತಕ್ಕೆ ಇದರಿಂದ ಮಾಲೀಸು ಮಾಡಬಹುದು. ಬಾಯಿಯ ಹುಣ್ಣುಗಳನ್ನೂ ನಿವಾರಿಸಬಹುದು.

ಔಷಧ ಪ್ರಪಂಚದಲ್ಲಿ ದೇಹದ ಒಳ ಮತ್ತು ಹೊರಗೆ ಬಳಸುವ ಆನೇಕ ಮದ್ದುಗಳಿಗೆ ಗ್ಲಿಸರಿನ್ ಬಳಕೆಯಾಗುತ್ತದೆ. ಸಿರಪ್, ಮಾತ್ರೆಗಳು, ಟಾನಿಕ್, ಮುಲಾಮು ಕಣ್ಣು ಕಿವಿಗಳಿಗೆ ಹಾಕುವ ಲೋಷನುಗಳು ಗ್ಲಿಸರಿನ್ ಯುಕ್ತವಾಗಿವೆ. ನೀರಿನಲ್ಲಿ ಕರಗದ ಲೋಹಯುಕ್ತ ಸಾಬೂನು ಗ್ಲಿಸರಿನ್‌ನಲ್ಲಿ ಕರಗುವಂತೆ, ಟಿಂಕ್ಚರಿನಂತಹ ರಾಸಾಯನಿಕಗಳ ತಯಾರಿಕೆಗೆ ಅದೊಂದು ದ್ರಾವಕವೂ ಆಗಿದೆ. ಹಲ್ಲಿನ ಮತ್ತು ಶಸ್ತ್ರಚಿಕಿತ್ಸೆಯ ಗಾಯದ ಸೂಕ್ಷ್ಮ ರೋಗಾಣು ನಿವಾರಣೆಯಲ್ಲಿ ಗ್ಲಿಸರಿನ್ ಪಾತ್ರವಿದೆ. ಉಬ್ಬಸ, ಮೂತ್ರಪಿಂಡದ ಖಾಯಿಲೆಗಳಲ್ಲಿ ಗುಣಕಾರಿಯೆನಿಸಿದ ಅದು ಕ್ಷಯರೋಗ ಮತ್ತು ಸಿಡುಬಿನ ಚುಚ್ಚುಮದ್ದುಗಳಿಗೆ ಸೇರ್ಪಡೆಯಾಗುತ್ತದೆ. ಸ್ತ್ರೀಯರ ಲೈಂಗಿಕ ವ್ಯಾಧಿಗಳ ಚಿಕಿತ್ಸೆಗೂ ಕೆಲವೊಮ್ಮೆ ಅದನ್ನು ಬಳಸುವುದಿದೆ. ಮಲವಿಸರ್ಜನೆಯಾಗದ ಮಕ್ಕಳ ಗುದದ್ವಾರಕ್ಕೆ ತುರುಕಿಸುವ ಬತ್ತಿಗಳಲ್ಲಿ ಗ್ಲಿಸರಿನ್ ಲೇಪನವಿದೆ ಕುದಿಹಟ್ಟಿನೊಂದಿಗೆ ಗ್ಲಿಸರಿನ್ ಬೆರಸಿ ಲೇಪಿಸಿದರೆ ಕುರುಗಳು ಒಡೆಯುತ್ತವೆ ತಲೆಹೊಟ್ಟಿನಿಂದಾಗಿ ಕೂದಲು ಉದುರುತ್ತಿದ್ದರೆ ಗ್ಲಿಸರಿನ್ ತಡೆಯುವುದು. ಪಾರದರ್ಶಕವಾದ ಹಲವು ನೊವುಗಳು ಗ್ಲಿಸರಿನ್ ಯುಕ್ತವಾಗಿವೆ. ಹೂವುಗಳಿಂದ ಕಂಪನ ತೈಲ ತೆಗೆಯಲು ಗ್ಲಿಸರಿನ್ ಬೇಕಾದಂತೆ ಶೃಂಗಾರ ಪ್ರಧಾನಗಳು, ಹಲ್ಲಿನಪೇಸ್ಟ್‌ಗಳು, ಸಿಗರೇಟು, ಚುಟ್ಟ, ವೀಳ್ಯದೊಂದಿಗೆ ತಿನ್ನುವ ತಂಬಾಕುಗಳಿಗೂ ಅಗತ್ಯವಾಗಿದೆ. ಸಿಂಧೂರದೊಂದಿಗೆ ಅದನ್ನು ಬೆರೆಸಿದಾಗ ಕಾಂಕ್ರೀಟಿನಂತಹ ಘನವಸ್ತುವಾಗಿ ಗೋಡೆಯ ಸಂದುಗಳನ್ನು ಅದರಿಂದ ಮುಚ್ಚಬಹುದು. ಕೈಗಾರಿಕಾ ಕ್ಷೇತ್ರಕ್ಕೆ ವರದಾನವೆನಿಸಿದ ಗ್ಲಿಸರಿನ್‌ನಿಂದ ನಾನಾಬಗೆಯ ಅಂಟುಗಳು, ಬಣ್ಣಗಳು ವಾರ್ನಿಷುಗಳು ತಯಾರಾಗುತ್ತವೆ.

ರಬ್ಬರು ಕಾರ್ಖಾನೆಗಳ ಪ್ರೊಟೆಕ್ಟಿವ್ಸ್‌ಗಳ ತಯಾರಿಕೆ, ಬೇಕಾದ ರೀತಿಯಲ್ಲಿ ಚರ್ಮಹದ ಮಾಡಲು, ಲೋಹದ ಕೈಗಾರಿಕೆಗಳಲ್ಲಿ ಬೆಸುಗೆ ಮತ್ತು ಪಾಲಿಷು ಕೆಲಸಕ್ಕೆ ಗ್ಲಿಸರಿನ್ ಬೇಕೇ ಬೇಕು. ಪೊಟಾಷಿಯಂ ಪರ್ಮಾಂಗ್‌ನೇಟಿನೊಂದಿಗೆ ಗ್ಲಿಸರಿನ್ ಬೆರೆತರೆ ತಕ್ಷಣ ಬೆಂಕಿ ಉತ್ಪನ್ನವಾಗುವುದರಿಂದಾಗಿ ಒಂದು ವಿಧದಸ್ಫೋಟಕ ಮದ್ದು ಕೂಡ ಇದರಿಂದ ತಯಾರಾಗುವುದು. ಹಲವು ಉಷ್ಣವಾಹಕಗಳ ನಿರ್ಮಾಣಕ್ಕೆ ಗ್ಲಿಸರಿನ್ ಅಗತ್ಯವಾದಂತೆ ಪ್ರಯೋಗಾಲಯಗಳಲ್ಲಿ ಕೆಂಪು ರಕ್ತಕಣಗಳನ್ನು ಪ್ರತ್ಯೇಕಿಸಲೂ ಬೇಕಾಗುತ್ತದೆ.

'ಜಲಾಂಶವನ್ನು ಹೀರಿಕೊಳ್ಳಬಲ್ಲ ಗ್ಲಿಸರಿನನ್ನು ಬಟ್ಟೆ ನೆಯ್ಯುವ ನೂಲಿಗೆ ಲೇಪಿಸುತ್ತಾರೆ. ಅದರಿಂದ ನೂಲು ಮೆದುವಾಗಿ ಕಡಿಮೆ ಘರ್ಷಣೆಯಿಂದ ಹೆಚ್ಚಿನ ಚಲನೆಯ ಸೌಲಭ್ಯ ಪಡೆಯಬಲ್ಲುದೆಂದೇ ಹತ್ತಿ ಗಿರಣಿಗಳಲ್ಲಿ ಗ್ಲಿಸರಿನ್‌ಗೆ ಪ್ರಾಧಾನ್ಯತೆ ಸೆಲ್ಯುಲೋಸ್ ಪದಾರ್ಥಗಳ ತಯಾರಿಕೆಯಲ್ಲಿ ಅದಕ್ಕೊಂದು ರೂಪ ಬರುವುದು



ಇದರಿಂದಲೇ. ಸ್ಟೈಯಿನಲೆಸ್ ಸ್ಟೀಲಿನ ಪರಿಕರಗಳಿಗೆ ಹೊಳಪಿನ ಮುಲಾಮು ಲೇಪನ ವಿದ್ಯುಚ್ಛಕ್ತಿಯಿಂದ ನಡೆಯುವುದಾದರೂ ಆಗ ಗ್ಲಿಸರಿನ್ ಲೇಪನ ಅನಿವಾರ್ಯ

ಹಾಲಿನಿಂದ ತಯಾರಿಸುವ ಐಸ್‌ಕ್ರೀಮಿನಂಥ ತಿನಿಸುಗಳ ರುಚಿ ಹೆಚ್ಚಿಸಿ ಬಹುಕಾಲ ಉಳಿಯುವಂತೆ ಮಾಡುವ ಗ್ಲಿಸರೀನ್ ಹಣ್ಣು ಮಾಂಸಗಳನ್ನು ಕೂಡ ದೀರ್ಘಕಾಲ ಸುರಕ್ಷಿತವಾಗಿರಿಸುತ್ತದೆ. ನಾನಾ ಕೈಗಾರಿಕೆಗಳಲ್ಲಿ ಅದರ ಪಾತ್ರವು ಹಿರಿದು ಅನಿವಾರ್ಯವೂ ನಿಜ.

೧೯೩೫ ರ ವರೆಗೆ ಭಾರತದಲ್ಲಿ ಸಾಬೂನು ಕಾರ್ಖಾನೆಗಳಲ್ಲಿ ಗ್ಲಿಸರಿನ್ ಸಿಗುತ್ತಿದ್ದರೂ ಅದನ್ನು ತೆಗೆಯುವ ವಿಧಾನ ತಿಳಿಯದೆ ನಷ್ಟವಾಗುತ್ತಿತ್ತು. ಆಗತ್ಯವಾದ ಗ್ಲಿಸರಿನ್ನನ್ನು ಇಂಗ್ಲೆಂಡಿನಿಂದ ತರಿಸಲಾಗುತ್ತಿತ್ತು. ಮೊದಲನೆಯ ಮಹಾಯುದ್ಧದ ಕಾಲದಲ್ಲಿ ಸರ್ದೇಸಾಯಿ ಕಂಪನಿ ಅದನ್ನು ಉತ್ಪಾದಿಸಿದರು. ಆದರೆ ಅದರ ಶುದ್ಧೀಕರಣದ ಉಪಕರಣಗಳು ನಮ್ಮಲ್ಲಿಲ್ಲದೆ ವಿದೇಶಕ್ಕೆ ಕಳುಹಿಸಬೇಕಾಗಿತ್ತು. ೧೯೩೫ ರಲ್ಲಿ ಮುಂಬೈಯಲ್ಲಿ ಪರಿಶುದ್ಧ ಗ್ಲಿಸರಿನ್ ಶೋಧನಾಗಾರ ತಲೆಯೆತ್ತಿದ ಮೇಲೆ ಆ ತೊಂದರೆ ತಪ್ಪಿತು. ಬೇರೆಕಡೆಯ ಕಾರ್ಖಾನೆಗಳಲ್ಲೂ ಅದನ್ನು ಶುದ್ಧೀಕರಿಸಿ, ಶೀಸೆ ಮತ್ತು ಡ್ರಮ್ಮುಗಳಿಗೆ ತುಂಬಿಸಿ ಬೇಕಾದಲ್ಲಿಗೆ ಕಳುಹಿಸುವ ಶೋಧಾನಾಗಾರ ಸ್ಥಾಪಿತವಾಗಿ ದೇಶ ಅದರಲ್ಲಿ ಸ್ವಾವಲಂಬಿಯಾಯಿತು.

ಪೆಟ್ರೋಲಿಯ ಕೈಗಾರಿಕೆಗಳಲ್ಲಿ ಸಿಗುವ ಪ್ರೊಪೇಲಿನ್ ರಾಸಾಯನಿಕದಿಂದ ಲಭಿಸುವ ಗ್ಲಿಸರಿನ್ ಅಮೇರಿಕದಲ್ಲಿ ಜನಪ್ರಿಯವಾಗಿದೆ.

---

ಅಟವೀಶಚರಿತ

ಕಂದ॥ ಮನನೊಲಿದು ಭಕ್ತಜನಮದು।
ದಿನದಿನವತಿ ದೂರಮಾದ ದೇಶಗಳಿಂದಂ॥
ತನತನಗೈದರಲಾದುದು।
ಘನ ಗುರುವಿನ ಮಹಿಮೆಯಂತೋ ಕಾಂಬರದಾರೋ॥
ನಾನಾವ್ಯಾಧಿಗಳಿಂದತಿ
ನಾನಾ ಗ್ರಹಭೀತಿಗಳೊಳು ನರಳುವರನಿಶಂ॥
ನಾನಾ ಚಿಂತೆಯೊಳಾಳ್ದರು
ನಾನಾ ದಿಕ್ಕಿನೊಳು ಕೂಡಿ ನಡೆತರುತಿರ್ದರ್॥

## ವಿದ್ಯಾರ್ಥಿ ಜೀವನದ ಬೆಳಕು ಸರಣಿ.

ಬಿ. ಎಸ್. ಕೃಷ್ಣಮೂರ್ತಿ, ನಂ. 5, ಸೀತಾವಿಲಾಸರಸ್ತೆ, ಮೈಸೂರು – 500 024.

ಸ್ನೇಹಸಂಪಾದನೆ :. ವಿದ್ಯಾರ್ಥಿಗಳು ವಿದ್ಯಾಭ್ಯಾಸ ಕಾಲದಲ್ಲಿ ಏಕಾಂಗಿಯಾಗಿರಲು ಸಾಧ್ಯವಿಲ್ಲ. ಪಾಠಗಳು ಆಯಾದಿನದಲ್ಲಿ ಪೂರ್ತಿಯಾದ ನಂತರ ಇಷ್ಟ ಮಿತ್ರರು ಬೇಕಾಗುತ್ತಾರೆ. ಅವರೊಡನೆ ಕಲೆತು, ವಿನೋದವಾಗಿ ಮಾತನಾಡುತ್ತಾ ನಾನಾಬಗೆಯ ಮಾತುಕಥೆಗಳನ್ನಾಡಿ, ದಿನ ತಳ್ಳಬೇಕು. ಸಂಜೆಯಲ್ಲಿ ತಮಗೆ ತೋಚಿದೆಡೆ ವಿಹರಿಸಿ ಮಾನಸಿಕ ಶಾಂತಿ ಪಡೆಯುವುದು ಬೇಸರಕಳೆಯುವ ಮಾರ್ಗವೆನ್ನಬಹುದು ಆಗ ಮುಂದಿನದ ಓದಿಗೆ ಮನಸ್ಸು ಹಗುರವಿರುತ್ತದೆ. ಸ್ನೇಹಮಾಡುವ ನಿಟ್ಟಿನಲ್ಲಿ ಮನವು ಆತುರದಿಂದ ಕೂಡಿರಬಾರದು. ಸ್ನೇಹಿತರು, ಗುಣಭರಿತರೂ, ಪ್ರಾಜ್ಞರೂ ಸುಸಂಸ್ಕೃತಿಯುಳ್ಳವರೂ, ವಿವೇಕಿಗಳೂ, ವಿದ್ಯಾಭಿಮಾನಿಗಳೂ ಆಗಿರುವವರನ್ನು ನೋಡಿ ಅವರ ಸ್ನೇಹ ಮಾಡಬೇಕು. ನೀವು ಕಾರಣವಶಾತ್ ತಪ್ಪುಹಾದಿ ಹಿಡಿದಾಗ ನಿಮ್ಮನ್ನು ತಿದ್ದಿ, ಬುದ್ಧಿಹೇಳಿ ಸನ್ಮಾರ್ಗದಲ್ಲಿ ನಡೆಸುವ ಕುಶಲಮತಿಗಳಾಗಿರಬೇಕು. ಇಂಥವರ ಸ್ನೇಹದಿಂದ ನೀವು ಉನ್ನತ ಶಿಖರವನ್ನೇರುವಿರಿ. ಆಗಲೇ ನಿಮ್ಮ ಅಜ್ಞಾನದ ತೆರೆಮಾಯವಾಗಿ ಜೀವನವು ಸಂತೋಷಭರಿತವಾಗುತ್ತದೆ. ಮನೋವಿಕಾಸವು ವೃದ್ಧಿಸುತ್ತದೆ. ನಿಮ್ಮಲ್ಲಿ ದುಷ್ಟಮಿತ್ರರು ಇದ್ದು ಕೀಳು ಭಾವನೆಗಳನ್ನು ಪ್ರೇರಿಸುವ ಸಮಯದಲ್ಲಿ ಎಚ್ಚೆತ್ತುಗೊಂಡು ಜಾಗರೂಕರಾಗಬೇಕು. ಆಗ ನೀವು ವಿವೇಕಿಗಳಾಗುವಿರಿ.

ಸ್ನೇಹಿತರು ನಾನಾ ಬಗೆಯುವರಿರುತ್ತಾರೆ. ಅವರ ಗುಣ, ಸ್ವಾಭಾವಗಳನ್ನು ನೀವು ತಿಳಿದಿರುವುದಿಲ್ಲ ಅವರ ಕೀಳುಸ್ವಭಾವ ಕಾಮನೆಗಳನ್ನು ಯಾರೂ ತಿಳಿಯಲಾಗದಂತೆ ಎಚ್ಚರವಿರುವ ಕುಶಲಿಗಳಿರುವರು. ಆದ್ದರಿಂದ ನೀವೂ ಜಾಗೃತರಿರಬೇಕು.

ಅನೇಕ ಗುರಿಗಳನ್ನಿಟ್ಟುಕೊಂಡಿರುವ ಸ್ನೇಹಿತರಿರುತ್ತಾರೆ. ಕೆಲವರು ನಿಮ್ಮಿಂದ ಏನಾದರೂ ಉಪಯೋಗ ಹೊಂದುವವರು ನಿಮ್ಮನ್ನು ಆಶ್ರಯಿಸಿ ಕೊಂಡು, ಬಹಳ ಆತ್ಮೀಯರಂತೆ ಬರುತ್ತಾರೆ. ಬಹಳ ಜಾಣತನದಿಂದ ಮಾತನಾಡಿ, ತಮ್ಮ ಆಸೆಗಳನ್ನು ನೆರವೇರಿಸಿ ಕೊಳ್ಳುವರು. ಆ ಕ್ಷಣವೇ ನಿಮ್ಮಿಂದ ದೂರವಾಗಿ ಜಾರಿಕೊಳ್ಳುತ್ತಾರೆ. ಇವರೇ ಸ್ವಾರ್ಥಸಾಧಕರು. ಉತ್ತಮ ಸ್ನೇಹಿತರ ದುರ್ಗುಣಗಳ ಕಡೆಗಾಗಲಿ ವೈರಿಗಳ ಸದ್ಗುಣ ಕಡೆಗಾಗಲಿ ನಾವು ಕುರುಡುತನವನ್ನು ತೋರಿಸಬಾರದು.

ಒಬ್ಬ ಆಂಗ್ಲೇಯ ಲೇಖಕನು Society, friendship and love divinely bestowed upon man" ಎಂದು ಹೇಳಿರುತ್ತಾನೆ. ಅಂದರೆ ಸಮಾಜ, ಗೆಳೆತನ, ಮತ್ತು ಪ್ರೇಮ ಇವು ಮೂರೂ ದೈವದತ್ತ ಕೊಡುಗೆಗಳಾಗಿವೆ ಎಂಬುದನ್ನು ತಿಳಿಯಬೇಕು. ವಿಶ್ವಾಸತುಂಬಿದ, ಸಮತಾಭಾವದಿಂದ ಕಷ್ಟ ಸುಖಗಳಲ್ಲಿ

ಬೆರೆತು ಪರಸ್ಪರ ಸಹಾಯ ಮಾಡುವ ಮಿತ್ರರು ಸಿಕ್ಕುವುದು ಪೂರ್ವಪುಣ್ಯವೇ ಅನ್ನ-ಬೇಕಾಗುತ್ತದೆ. ಇಂಥವರು ದೊರಕಿದರೆ, ಅಂಥವರ ಸ್ನೇಹಮಾಡಿ, ಹೊಂದಿಕೊಂಡು ಅವರ ಮೈತ್ರಿಯನ್ನು ಉಳಿಸಿಕೊಳ್ಳಬೇಕು. ಇದು ಜಾಣರ ಗುಣ.

ಸರ್ವಗುಣ ಸಂಪನ್ನರಾದ ಮಿತ್ರರು, ತಮಗೆ ಅನೇಕ ಕುಂದುಗಳಿದ್ದರೂ ಆಪ್ತರ ಕಷ್ಟ ಸುಖಗಳಲ್ಲೂ, ಹುಟ್ಟು ಸಾವುಗಳಲ್ಲೂ, ಪ್ರಾಣಾಪಾಯಗಳಲ್ಲೂ, ಆಪತ್ತುಗಳಲ್ಲೂ ಮುನ್ನುಗ್ಗಿ ಸಹಾಯ ಮಾಡುವರು. ಇಂಥವರು ಈಚಿನ ದಿನಗಳಲ್ಲಿ ಬಹು ಅಪರೂಪ ! ಒಂದು ವೇಳೆ ಇದ್ದರೆ ಇವರೇ ನಿಜವಾದ ಮಿತ್ರರು !

ಸಹವಾಸದೋಷದಿಂದಲೋ, ಪರಿಸ್ಥಿತಿಯ ಒತ್ತಡದಿಂದಲೋ ಮನುಷ್ಯರ ಗುಣ ಬದಲಾಗುತ್ತದೆ. ಇದು ಅನಿವಾರ್ಯ. ಕಾಲಕ್ರಮೇಣ ಈ ಗುಣ ಬದಲಾದೀತು ! ಯಾವಾಗಲೂ ಕೆಲವು ಮಿತ್ರರು ವಿನಾಕಾರಣ ನಗುತ್ತಲೇ, ನಿಮ್ಮ ಬಳಿಗೆ ಬಂದು, ವಿನೋದವಾಗಿ ಮಾತನಾಡುತ್ತಾ, ಅಧಿಕ ಸ್ನೇಹದಯತ್ನ ಮಾಡುತ್ತಾರೆ. ಇಂಥವರ ಸ್ನೇಹ ಮಾಡಲು ನೀವು ನಿಧಾನವಾಗಿ, ಆಳವಾಗಿ ಯೋಚಿಸಿ ಈ ಮಿತ್ರತ್ವ ನಿಜ-ವಾದುದೇ ಎಂದು ತಿಳಿದಾಗ ಸ್ನೇಹ ಮಾಡಿರಿ. ಕೆಲವು ಸ್ನೇಹಿತರು ಹಿತವಚನಗಳನ್ನಾಡಿ, ಅವರ ಮರ್ಮವನ್ನು ಮುಚ್ಚಿಟ್ಟುಕೊಂಡು ಬೆನ್ನಿಗೆ ಚೂರಿಯಿಂದ ಇರಿಯುವವರೂ ಇರುವುದುಂಟು. ಆಪತ್ಕಾಲದಲ್ಲಿ ಆಸರೆ ಕೊಟ್ಟವನೇ ನಿಜ ಮಿತ್ರನಾದಾನು ! ಉತ್ತಮರ ಸ್ನೇಹದಿಂದ ಸಂತೋಷ, ಮನಶ್ಶಾಂತಿ ಲಭಿಸುವುದೆಂಬುದು ನಿರ್ವಿವಾದ.

---

ಅವರಿಸಿರ್ದ ಕಲ್ಪತರು ಕಾನನದೊಳ್ ಪವನಾಶನಂ ಮಣಿ
ಗ್ರಾವದೆ ಜಾನಮಂತೆ ಕನಕಾಬ್ಜಸರೋವರದಲ್ಲಿ ಮಜ್ಜನಂ
ದೇವ ವಧೂ ಸಮೀಪದೊಳೆ ಸಂಯಮೊಪ್ಪೆ ಪೆರರ್ ಮುನೀಂದ್ರರೊ
ಲ್ದಾವುದ ಕಾಂಕ್ಷಿಪರ್ ತಪಮಿರ್ದಪರಲ್ಲಿ ತಾಮಿವರ್

ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳ
—"ಶಾಕುಂತಳ ನಾಟಕ"ದಿಂದ.





# ಮರತಪಸ್ವಿ (ಧಾರವಾಹಿ-5)

ಜಿ. ರಾಧಾದೇವಿ, ಕಾದಂಬರಿಗಾರ್ತಿ, ಬೆಸ್ತವಾರಪೇಟೆ, ರಾಯಚೂರು-584101

ಶ್ರೀಮತಿ ಹೆಚ್. ಜಿ. ರಾಧಾದೇವಿ ಅವರು ಧರ್ಮಸ್ಥಳದ ಹಿಂದಿನ ಧರ್ಮಾಧಿಕಾರಿಗಳನ್ನು ಧಾರ್ಮಿಕ ಕ್ಷೇತ್ರ, ಸಾಮಾಜಿಕ ಕ್ಷೇತ್ರ, ಸಾರ್ವತ್ರಿಕ, ಆರ್ಥಿಕ ಕ್ಷೇತ್ರಗಳಲ್ಲಿ ಸಮಾಜಕ್ಕೆ ಧಾರೆ ಎರೆದ ಅವರ ಸಮರ್ಪಣಾ ಬದುಕನ್ನು ಸುಂದರವಾಗಿ ನಿರೂಪಿಸಿ ಪರಿಚಯಿಸಿ ಕೊಟ್ಟಿದ್ದಾರೆ.

ಸಾರ್ವಜನಿಕ ಜೀವನದಲ್ಲಿ ಶ್ರೀ ಮಂಜಯ್ಯ ಹೆಗಡೆಯವರು ಏನೇನು ಲೋಕಹಿತ ಕಾರ್ಯಗಳನ್ನು ಮಾಡಿದರೆಂಬುದು ವಿವರಿಸುತ್ತ ಹೋದರೆ ಒಂದು ಮಹಾಗ್ರಂಥವೆ ಬೇಕಾಗುತ್ತದೆ

ಲಲಿತ ಕಲಾ ಗೋಷ್ಠಿಗಳನ್ನೇರ್ಪಡಿಸಿದಾಗ ನಾಡಿನ ಗಣ್ಯ ಸಾಹಿತಿಳು ವಿದ್ವಾಂಸರನ್ನು ಸಂಗೀತಗಾರರನ್ನು ಬರ ಮಾಡಿಕೊಂಡು ಅವರ ಕಲೆ ಪ್ರಸಾರ ಮಾಡಿ; ಆನಂದಿಸಿ ಅವರಿಗೆ ಗೌರವ ಸಂಭಾವನೆ ನೀಡುತ್ತಿದ್ದರ.

ದೇವಸ್ಥಾನದ ಆದಾಯ, ಪೂಜೆ ಉತ್ಸವ ಎಲ್ಲದರ ಆಭಿವೃದ್ಧಿ ಕೆಲಸಗಳು ಒಂದೆಡೇ ಜೊತೆಗೆ ಆಪ್ತರಾಗಿ ಅಥವ ಆರ್ತಗಳಾಗಿ ಬಂದವರನ್ನು ಸುಧಾರಿಸುವ ಕೆಲಸಾ-ಇನ್ನೊಂದೆಡೆಗೆ.

ಮಧ್ಯೆ ತಮ್ಮ ಚಿತ್ರಕಲಾ ರಚನೆ-ನಾಡಿನ ಅನೇಕ ಸಂಘ ಸಂಸ್ಥೆಗಳಿಂದ ಅವರಿಗೆ ಆಹ್ವಾನ ಬರುತ್ತಿದ್ದವು, ಒಳ್ಳೆಯ ಕೆಲಸ ಎಲ್ಲಾದರೂ ಹೋಗಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು, ಆ ಕೆಲಸ ಕಾರ್ಯಗಳಿಗೆ ಕೈ ತುಂಬ ಹಣ ಕೊಡುತ್ತಿದ್ದರು ತಮ್ಮ ಧರ್ಮಸ್ಥಳ ದೇವಸ್ಥಾನವನ್ನು ನವೀಕರಿಸಿದ್ದು, ದೇವರಿಗೆ ಬೆಳ್ಳಿರಥ, ಅನೇಕ ಬಗೆಯ ಸುವರ್ಣ ಆಭರಣಗಳನ್ನು ಮಾಡಿಸಿದ್ದು, ಹೊಸ ಹೊಸ ಉತ್ಸವಗಳನ್ನು ಏರ್ಪಡಿಸಿದ್ದು ವೈದಿಕ ಬ್ರಾಹ್ಮಣರಿಗೆ ಜೀವನೋಪಾಯ ಏರ್ಪಡಿಸಿದ್ದು ಮಾತ್ರವಲ್ಲದೇ ನಾಡಿನ ಬೇರೆ ಬೇರೆ ಕಡೆ ಇರುವ ಅನೇಕ ಶಿಥಿಲ ದೇವಾಲಾಯಗಳನ್ನು ಜೀರ್ಣೋದ್ಧಾರ ಮಾಡಿಸಿದರು, ಪೂಜೆ ಇಲ್ಲದ ದೇವಸ್ಥಾನಗಳಿಗೆ ಅರ್ಚಕರನ್ನು ನೇಮಿಸಿ ಅವರಿಗೆ ಸಂಬಳ, ವಸತಿ, ಅಕ್ಕಿಪಡಿ ಹೀಗೆ ಜೀವನೋಪಾಯ ಕಲ್ಪಿಸಿ ದೇವರಿಗೆ ಪೂಜೆ ಏರ್ಪಡಿಡಿಸಿದರು,

ನಾಡಿನ ನಾನಾ ದೇವಾಲಯಗಳಿಗೆ ಸುವ್ವಲಾಲಿ
ಧರ್ಮಧನ, ದಾನ ದತ್ತಿ ನೀಡಿದರು ಸುವ್ವಲಾಲಿ
ವೈದಿಕ ಬ್ರಾಹ್ಮಣರಿಗೆ ಉಂಬಳಿ ನೀಡಿ ಸುವ್ವಲಾಲಿ
ದೈವಸನ್ನಿಧಾನದಲ್ಲಿ ಪೂಜೆ ಏರ್ಪಡಿಸಿದರು ಸುವ್ವಲಾಲಿ

ಮಹಾಕ್ಷೇತ್ರಗಳಲ್ಲಿ ಇರುವ ದೇವಾಲಯಗಳು ಅಲ್ಲದೆ ನಿಮ್ಮ ಊರೂರಿನ ದೇವಾಲಯಗಳು ಸುಸ್ಥಿತಿಯಲ್ಲಿ ಇರುವಂತೆ ನೋಡಿಕೊಳ್ಳಿ, ಎಂದು ಶ್ರೀ ಕ್ಷೇತ್ರಕ್ಕೆ ಬಂದ ಬೇರೆ ಊರಿನ ಧನಿಕರಿಗೂ ಸಂದೇಶ ನೀಡುತ್ತಿದ್ದರು.

ಇಷ್ಟೆಲ್ಲ ದಾನಧರ್ಮ, ಆರ್ತಗಳಾಗಿ ಬಂದವರಿಗೆ ಕೈ ತುಂಬ ಸಹಾಯ, ವಿದ್ವಾಂಸ ಜನಕ್ಕೆ ಸಂಭಾವನೆ ಅಭಿವೃದ್ಧಿ ಕೆಲಸ ಕಾರ್ಯಗಳಿಗೆ ನಿರಂತರ ಹಣಾ ಎಲ್ಲಿಂದ ಬರುತ್ತಿತ್ತು ?

ಈ ಸಂದರ್ಭದಲ್ಲಿ ಶ್ರೀ ರಾಮನ ಪೂರ್ವಜನಾದ ಇಕ್ಷ್ವಾಕು ವಂಶದ ಶ್ರೀ ರಘುಮಹಾರಾಜನ ನೆನಪು ಬರುತ್ತದೆ.

ಇಂಥಾ ಕಾರ್ಯಕ್ಕೆ ಇಷ್ಟು ಹಣ ಎಂದು ನಿರಂತರವಾಗಿ ದಾನ ಧರ್ಮ ಹಾಗೂ ಪ್ರಜಾಕಲ್ಯಾಣ ಕಾರ್ಯಗಳನ್ನು ಮಾಡುತ್ತಿದ್ದ ರಘು ಮಹಾರಾಜನಿಗೆ ತನ್ನ ಭಂಡಾರದ ಎಷ್ಟು ಹಣ ಖರ್ಚಾಗಿದೆ ? ಎಷ್ಟು ಉಳಿದಿದೆ ? ಎಂದು ಚಿಂತೆಯೇ ಇರಲಿಲ್ಲವಂತೆ. ಆದರೆ ಅವನ ಭಂಡಾರ ಯಾವಾಗಲೂ ತುಂಬಿರುತ್ತಿತ್ತು, ಒಮ್ಮೆ ಮಹಾಯಜ್ಞವೊಂದನ್ನು ಆಚರಿಸಿ ಋಷಿ ಮುನಿಗಳಿಗೆ ಹಾಗೂ ಸಮಸ್ತ ಯಾಚಕ ವರ್ಗಕ್ಕೆ ತನ್ನ ಸಂಪತ್ತೆಲ್ಲಾ ಸೂರೆ ಮಾಡಿದನಂತೆ, ಅರಮನೆ, ಭಂಡಾರ, ಎಲ್ಲಾ ಖಾಲಿಯಾಯಿತು, ಅದೇ ಸಮಯದಲ್ಲಿ ಅಪಾರ ಧನರಾಶಿ ಬೇಡಿ ಋಷಿ ಓರ್ವರು ಬಂದರಂತೆ, ಮಣ್ಣಿನ ಪಾತ್ರೆಯಲ್ಲಿ ತನ್ನ ಕಾಲು ತೊಳೆಯಲು ರಾಜನ ಸ್ಥಿತಿ ಕಂಡು "ಅಯ್ಯಾ ! ನಿನ್ನಲ್ಲಿಗೆ ಧನದ ರಾಶಿ ಕೇಳಲು ಬಂದ ನಾನೆಂಥಾ ಹುಚ್ಚ !" ಎಂದು ಋಷಿ ಪೇಚಾಡಿದನಂತೆ, ಋಷಿ ಬಂದ ಉದ್ದೇಶ ತಿಳಿದ ರಘು ಮಹಾರಾಜ "ನನ್ನ ಬಳಿ ಯಾಚಕರಾಗಿ ಬಂದ ಯಾರನ್ನೂ ಬರಿಗೈಯಲ್ಲಿ ಕಳಿಸಲಾರೆ, ನಾನು ಸ್ವರ್ಗಕ್ಕೆ ಧಾಳಿ ಇಟ್ಟು ಸಂಪತ್ತನ್ನು ಸೂರೆಮಾಡಿ ತರುವೆ, ನನಗೆ ಕೆಲವು ದಿನ ಅವಕಾಶ ಕೊಡಿ.......ಎಂದು ಬೇಡಿದನಂತೆ, ಆದರೆ ಮಾರನೆದಿನ ಇವನ ಭಂಡಾರ ಅಪೂರ್ವ ರತ್ನರಾಶಿ, ಧನಕನಕದಿಂದ ತುಂಬಿ ತುಳುಕುತ್ತಿತ್ತಂತೆ.

ಕಾವಲುಗಾರರು ಬಂದು ಮಹಾಪುಣ್ಯಶಾಲಿ ಹಾಗೂ ಮಹಾನ್ ಧರ್ಮಿಷ್ಠನಾದ ಶ್ರೀ ರಘುಮಹಾರಾಜನಿಗೆ "ದೇವೇಂದ್ರನೂ ಎದುರಿಸಲಾರ, ಶಸ್ತ್ರಾಸ್ತ್ರ ಬೇಡಾ...... ಕಪ್ಪ ಎಂದು ಸ್ವೀಕರಿಸಿ ಎಂದು ಹೇಳಿ ದೇವದೂತರು ರಾತ್ರೋರಾತ್ರಿ ಅಪಾರ ಧನ ರಾಶಿ ಸುರಿದು ಹೋದರಂತೆ. ಋಷಿಗೆ ಮಾರನೆದಿನವೇ ಅವನು ಬಯಸಿದ ಎರಡರಷ್ಟು ಧನ ಕನಕರಾಶಿ ತನ್ನ ಸೇವಕರೊಡನೆ ಹೊರಿಸಿ ಕಳಿಸಿದನಂತೆ.



ಶ್ರೀ ಮಂಜಯ್ಯ ಹೆಗಡೆಯವರನ್ನು ಶ್ರೀ ರಘುಮಹಾ ರಾಜನಿಗೆ ಹೋಲಿಸಬಹುದು, ಮಹಾನಡಾವಳಿಕೆ ಮಹಾಕಾರ್ಯ ಇವರ ಕಾಲದಲ್ಲಿ ಲೀಲಾಜಾಲವಾಗಿ ನಡೆದು ಯಶಸ್ವಿಯಾಯಿತು. ಅನೇಕ ಲೌಕಿಕ ಅಡ್ಡಿಗಳು ಆಶ್ಚರ್ಯಕರ ರೀತಿಯಲ್ಲಿ ಪಾರಾಗಿ ದೈವೀಸಹಾಯ ಒದಗಿ ಬಂತು. ಮಹಾಯಜ್ಞದಂಥಾ ಈ ಮಹಾಕಾರ್ಯ ಅಪೂರ್ವವಾಗಿ ನೆರವೇರಿತು. ಶ್ರೀ ಮಂಜುನಾಥನೆ ಇವರಿಗೆ ಬಲಗೈ ಆಗಿ ನಿಂತು ಇವರು ಕೈಗೊಂಡ ಕಾರ್ಯ ಪೂರ್ತಿ ಮಾಡುತ್ತಿದ್ದ. ಶ್ರೀ ರಾಮನ ಅಶ್ವಮೇಧಯಾಗ ಕಾಲದಲ್ಲಿ ಸಮಸ್ತ ಬ್ರಾಹ್ಮಣರಿಗೆ ದಾನ ದಕ್ಷಿಣೆ ನೀಡಿ ಸಮಸ್ತ ಜಾತಿಯ ಯಾಚಕ ವರ್ಗಕ್ಕೆ ಸಂಪತ್ತು ಸೂರೆಯಾದಂತೆ, ಮಹಾನಡಾವಳಿಕೆಯಲ್ಲಿ ದಿನ ದಿನಕ್ಕೆ ಲಕ್ಷಾಂತರ ಜನರ ಊಟಾ ತಿಂಡಿ, ಶ್ರೀ ಕ್ಷೇತ್ರದ ಎಲ್ಲಾ ದೇವರಿಗೆ ಪೂಜೆ, ಉತ್ಸವಗಳು ನಡೆಯಿತು. ನಡಾವಳಿಯ ನಿಯಮದಂತೆ ಸಮಸ್ತ ಸಂಪತ್ತನ್ನು ಸೂರೆಗರ್ಪಣೆ ಮಾಡಿ, ವರತಪಸ್ವಿಗಳಾಗಿ ವಿಜೃಂಭಿಸಿದರು ಶ್ರೀ ಮಂಜಯ್ಯ ಹೆಗ್ಗಡೆ ಅವರು.

ಅನ್ನ ಅಕ್ಷಯ ವಾಯ್ತು ಸುವ್ವಲಾಲಿ
ಮಹಾನಾಡವಳಿಯ ದಿವ್ಯ ಮಹಿಮೆ ಸುವ್ವಲಾಲಿ
ಪುಣ್ಯಶಾಲಿ ಶ್ರೀ ಮಂಜಯ್ಯ ಹೆಗ್ಗಡೇರಿಗೆ ಸುವ್ವಲಾಲಿ
ಪುಣ್ಯ ಅಕ್ಷಯ ವಾಯ್ತು ಸುವ್ವಲಾಲಿ ॥

ಅದುವರೆವಿಗೂ ಅನೇಕ ಪುಣ್ಯಕಾರ್ಯ ಮಾಡಿ, ಮಹಾ ಪುಣ್ಯ ಸಂಪಾದಿಸಿದ್ದ ಶ್ರೀ ಮಂಜಯ್ಯ ಹೆಗ್ಗಡೆಯವರು, ಈ ಮಹಾನಡಾವಳಿಯನ್ನು ಯಶಸ್ವಿಯಾಗಿ ನಿರ್ವಹಿಸಿ ಎಂದೆಂದಿಗೂ ವೃದ್ಧಿಯಾಗುವ ಅಕ್ಷಯ ಪುಣ್ಯರಾಶಿಗಳಿಸಿ ಕೊಂಡರು.

(ಸಶೇಷ)

---

ಶಿವ ನಿಮ್ಮ ಪಾದಾರವಿಂದವನು ನೆರೆನಂಬಿ
ಭವಜಲಧಿಯುತ್ತರಿಸಿ ನಿತ್ಯಪದವಿಯ ಸಾಧ
ನವ ಮಾಡಬೇಕೆಂಬ ಸದ್ಗುಣವು ಪಿರಿಯ ಸುಕೃತವ ಮಾಡಿದರಿಗಲ್ಲದೆ॥

ಕವಲುಗೊಂಡಿಹ ಮನದ ಕಿರುಕುಳಿಗಳೆಲ್ಲರಿಗೆ
ಧವಳಾಂಗ ನಿಮ್ಮ ಪೂಜಾವ್ರತವು ಬರಲುಂಟೆ
ರವಿಕೋಟಿ ಸನ್ನಿಭನೆ ನಿಜಲಿಂಗ ಭವಭಂಗ ಶರಣಜನ ಭಕ್ತಸಂಗಾ ॥

—ನಿಜಲಿಂಗ ಶತಕ.



# ಮುಷ್ಟಿಯುದ್ಧ-ಹಿಂಸಾತ್ಮಕ ಕ್ರೀಡೆ

ಶ್ರೀ ಬಿ. ಸುಬ್ರಾಯ ಅಡಿಗ, ನಿವೃತ್ತ ಶಿಕ್ಷಕರು, ಸಂಡೂರು, ರಾಯಚೂರು-ಜಿಲ್ಲೆ.

ಸ್ಪರ್ಧೆಗಾಗಿ ನಿರ್ಧರಿಸಲ್ಪಟ್ಟ ೧೨ ಸುತ್ತುಗಳು ಪೂರ್ಣವಾಗುವ ಮೊದಲೇ ಅಂದರೆ ೫ನೇ ಸುತ್ತಿನಲ್ಲೇ ಒಬ್ಬ ಆಟಗಾರ ಎದುರಾಳಿಯನ್ನು ಸೋಲಿಸಿ ೮೦ ಲಕ್ಷ ಡಾಲರ್ (ಸುಮಾರು ೧೨ ಕೋಟಿ ೮೦ ಲಕ್ಷರೂಪಾಯಿ) ಮೊತ್ತವನ್ನು ಗೆದ್ದುಕೊಂಡನೆಂಬುದು ನಿಜಕ್ಕೂ ವಿಚಿತ್ರ ಸಂಗತಿಯಲ್ಲವೇ ? ಈ ಆಟದಲ್ಲಿ ಸೋತ ಆಟಗಾರನು ೩೮ ಲಕ್ಷ ಡಾಲರ್ (ಸುಮಾರು ೬ ಕೋಟಿ ೮ ಲಕ್ಷರೂಪಾಯಿ) ಪಡೆದ.

ಇದೇನೂ ಲಾಟರಿಯಾಟವಾಗಿರದೆ **ಮುಷ್ಟಿ ಯುದ್ಧ** (ಬಾಕ್ಸಿಂಗ್)ದ ಸ್ಪರ್ಧೆಯಾಗಿತು. ೨೫-೨-೧೯೮೯ ರಂದು ಇದು ಲಾಸ್ ಬೋಗ್ರಾಸ್‌ದಲ್ಲಿ ನಡೆಯಿತು. ಇದರಲ್ಲಿ ಅಮೇರಿಕೆಯ ೨೨ ವರ್ಷದ ಮುಷ್ಟಿ ಯೋಧ ಮೈಕ್‌ಟಾಯ್ಸನ್ ಬ್ರಿಟನಿನ ಮುಷ್ಟಿ ಯೋಧ ಫ್ರಾಂಕ್‌ಬ್ರೂನೋನನ್ನು ನಿಶ್ಚಿತ ಸುತ್ತುಗಳಿಗೆ ಮೊದಲೇ ತನ್ನ ಬಿರುಸಾದ ಗುದ್ದುಗಳ ಹೊಡೆತದಿಂದ ರಿಂಗ್‌ದೊಳಗೇ ಬೀಳಿಸಿಬಿಟ್ಟ. ಟಾಯ್ಸನ್‌ನ ಮುಷ್ಟಿಪ್ರಹಾರದಿಂದ ಬ್ರೂನೋನ ಮೂಗಿನಿಂದ ರಕ್ತ ಹರಿಯತೊಡಗಿದಾಗ ಆತ ರಿಂಗಿನೊಳಗೇ ಬಿದ್ದುಬಿಟ್ಟ. ರೆಫ್ರೀ ಡ್ ರ್ ಸ್ಟೀಲ್ ಟಾಯ್ಸನ್ ಗೆದ್ದುದಾಗಿ ಘೋಷಿಸಿದ. ಆಗ ಗೆದ್ದವನಿಗೆ ೩೬.೦ ಹಾಗೂ ಸೋತವನಿಗೆ ೩೨.೩ ಅಂಕಗಳು ದೊರೆತಿದ್ದವು.

ಮೈಕ್ ಟಾಯ್ಸನ್ ಈ ಮೊದಲೂ ೬-೯-೧೯೮೮ ರಂದು ಅಮೇರಿಕೆಯ ಅಟ್ಲಾಂಟಿಕ್ ನಗರದಲ್ಲಿ ಜರಗಿದ ಮುಷ್ಟಿಯುದ್ಧದಲ್ಲಿ ಜಯಗಳಿಸಿದ್ದ. ಅದರಲ್ಲಿ ಆತ ಒಲಿಂಪಿಕ್ ಸ್ವರ್ಣಪದಕ ವಿಜೇತ ಸ್ಪಿಂಕ್‌ನನ್ನು ಬರೀ ೯೧ ಸೆಕೆಂಡಿನಲ್ಲಿ ರಿಂಗ್‌ದಿಂದ ಹೊರಗಟ್ಟಿದ್ದ ! ಆಗ ಅವನಿಗೆ ೨ ಕೋಟಿ ಡಾಲರ್ ಹಾಗೂ ಸೋತವನಿಗೆ ೧ ಕೋಟಿ ೩೫ ಲಕ್ಷ ಡಾಲರ್ ಮೊತ್ತ ದೊರೆತಿತ್ತು.

ಆ ವೇಳೆ ಇವರಿಬ್ಬರ ಪಂದ್ಯವನ್ನು ಕಾಣಲು ನೆರೆದ ಜನಸ್ತೋಮವು ಮುಷ್ಟಿಯುದ್ಧದ ಇತಿಹಾಸದಲ್ಲಿ ಹೊಸವಿಕ್ರಮ ಸಾಧಿಸಿತು. ವ್ಯವಸ್ಥಾಪಕರು ಈ ಪಂದ್ಯದಿಂದ ಸುಮಾರು ೮ ಕೋಟಿ ಡಾಲರ್ ಹಣಗಳಿಸಿದರು.

ಇಂದಿನ ಒಲಿಂಪಿಕ್ ಕ್ರೀಡೆಗಳಲ್ಲಿ ಮುಷ್ಟಿಯುದ್ಧವೂ ಒಂದು ಆಟವೆಂದು ಪರಿಗಣಿಸಬೇಕೇ ? ಎಂಬುದು ವಿವಾದಾತ್ಮಕ ಅಂಶ, ಭಯಂಕರ ಕ್ರೂರತೆಯಿಂದಾಗಿ ಮುಷ್ಟಿಯುದ್ಧವು ಹಿಂಸೆಯ ಪ್ರತಿರೂಪ ಎನಿಸಿದೆ. ಈ ಆಟವನ್ನು ಒಲಂಪಿಕ್‌ದಿಂದ ಹೊರ ಹಾಕಬೇಕೆಂದೂ ಹಲವು ಸಲ ವಾದಿಸಲಾಯಿತು. ಏಕೆಂದರೆ ಇದರಿಂದ ಶಾರೀರಿಕ ಹಾಗೂ ಮಾನಸಿಕ ಹಾನಿ ಉಂಟಾಗುವುದಷ್ಟೇ ಅಲ್ಲ ಪ್ರೇಕ್ಷಕರಲ್ಲೂ ಹಿಂಸಾಪ್ರವೃತ್ತಿ ಜಾಗ್ರತವಾಗುತ್ತದೆ.



ಮುಷ್ಟಿಯುದ್ಧ ಒಂದನ್ನು ಬಿಟ್ಟರೆ ಬೇರಾವ ಆಟದಲ್ಲೂ ತನ್ನ ಎದುರಾಳಿಗೆ ಆಘಾತ ಉಂಟುಮಾಡುವ ಉದ್ದೇಶ ಇರುವುದಿಲ್ಲ. ಮುಷ್ಟಿ ಪ್ರಹಾರದಿಂದ ಇತರರ ಸಹನಶೀಲತೆ ಪರೀಕ್ಷಿಸುವುದೂ ತನ್ನ ವಿರೋಧಿಯನ್ನು ರಕ್ತರಂಜಿತಗೊಳಿಸುವುದೂ ಈ ಆಟದ ವೈಶಿಷ್ಟ್ಯ.

ಫುಟಬಾಲ್, ಹಾಕೀ, ಪೋಲೋ, ಮೊದಲಾದ ಆಟಗಳಲ್ಲಿ ಆಟಗಾರರಿಗೆ ಕೆಲವು ಸಲ ಭಯಂಕರ ಪೆಟ್ಟು ಉಂಟಾಗುತ್ತದೆ. ಕೆಲವೊಮ್ಮೆ ಅವರು ಸಾವಿಗೀಡಾಗುವುದೂ ಉಂಟು. ಇಷ್ಟಾದರೂ ಈ ಆಟಗಳು ಮುಷ್ಟಿಯುದ್ಧದಷ್ಟು ಅಪಾಯಕಾರಿಯಲ್ಲ. ಈ ಆಟದಲ್ಲಿ ಗೆಲ್ಲಬೇಕಾದರೆ ಎದುರಾಳಿಯ ಮೋರೆ ಹಣೆ ಹಾಗೂ ತಲೆಗೆ ಬಲವಾಗಿ ಬಡಿಯುವುದು ಅಗತ್ಯ ಎದುರಾಳಿ ದುರ್ಬಲವಾದರೆ ಹೊಡೆದಾತ ಗೆದ್ದಂತೆಯೇ ಎಂತಲೇ ಎಲ್ಲ ಮುಷ್ಟಿಯೋಧರು ಎದುರಾಳಿಗಳ ಮೋರೆಗೆ ಹೊಡೆಯಲು ಯತ್ನಿಸುತ್ತಾರೆ.

ಮುಷ್ಟಿಯೋಧನಲ್ಲಿ ಶಾರೀರಿಕ ಶಕ್ತಿಯು ಜತೆಗೆ ಮಾನಸಿಕ ಸಮತೋಲನವೂ ಅಗತ್ಯ, ಆದರೆ ಎದುರಾಳಿಯನ್ನು ಹೊಡೆತಗಳಿಂದ ಜರ್ಜರಿತಗೊಳಿಸುವುದು ಅಭಿಮಾನದ ಸಂಗತಿಯೆಂದು ಈ ಆಟದಲ್ಲಿ ಭಾವಿಸಲಾಗುತ್ತದೆ. ಒಲಿಂಪಿಕ್ ಆಟಗಳಲ್ಲಿ ಮುಷ್ಟಿಯುದ್ಧವನ್ನೇ ಉದ್ಯೋಗವಾಗಿ ಮಾಡಿಕೊಂಡ ಆಟಗಾರರು ಆಡುವಂತಿಲ್ಲ. ಹವ್ಯಾಸಿ ಆಟಗಾರರ ಗುರಿಯೂ ಎದುರಾಳಿಯ ತಲೆಯೇ ಆಗಿರುತ್ತದೆ.

ಇತರರನ್ನು ಹೊಡೆದು ಜರ್ಜರಗೊಳಿಸುವ ಪ್ರಯತ್ನದಲ್ಲಿ ಕೆಲವೊಮ್ಮೆ ಹೊಡೆಯುವವನೂ ತನ್ನ ಮಾನಸಿಕ ಸಮತೋಲನವನ್ನು ಕಳೆದುಕೊಳ್ಳುತ್ತಾನೆ. ಟಾಯ್ಸನ್ ಕೂಡ ಇದಕ್ಕೆ ಹೊರತಾಗಿಲ್ಲ. ಟಾಯ್ಸನ್ ಮತ್ತು ಬ್ರೂನೋನ ಹಿಂದಿನ ಪ್ರದರ್ಶನಗಳತ್ತ ದೃಷ್ಟಿ ಹರಿಸಿದರೆ ಟಾಯ್ಸನ್, ಈ ಪಂದ್ಯಕ್ಕೂ ಮುನ್ನ ೩೫ ಪಂದ್ಯಗಳನ್ನು ಗೆದ್ದಿರುವ ಬ್ರೂನೋ ಆದುವರೆಗಿನ 31 ಪಂದ್ಯಗಳಲ್ಲಿ ಮೂರುಬಾರಿ ಸೋತಿರುವ, ಮೊದಲ ಸಲ ಮೇ ೧೯೮೬ ರಲ್ಲಿ ಜೇಮ್ಸ್ ಸ್ಮಿತ್ ನಿಂದ ಹಾಗೂ ಎರಡನೆ ಸಲ ಬೇರಿಟ್ಲೀಯಲ್ಲಿ ಟಿಮ್ ವಿಂದರ ಸ್ಪೂನ್‌ನಿಂದ ಸೋತಿದ್ದ. ಟಾಯ್ಸನ್‌ನ ಆಟ ಹಾಗೂ ಅವನ ಅಪರಾಜಿತ ರಿಕಾರ್ಡ್‌ನೋಡುವಾಗ, ಮುಷ್ಟಿಯುದ್ಧದ ವಿರೋಧಸ್ವರಗಳೇ ಹೆಚ್ಚಾಗಿ ಕೇಳಿಬರುತ್ತಿವೆ. ಮುಷ್ಟಿಯುದ್ಧದ ಆಟವೇ ಅಪರಾಧ ಜಗತ್ತಿಗೆ ಸಂಬಂಧಿಸಿದ ಗೂಂಡಾಗಳು ಆವಿಷ್ಕರಿಸಿದರೆಂದು ಹೇಳುತ್ತಾರೆ. ಆದರೆ ಇದನ್ನ ಸಭ್ಯ ಸಮಾಜದ ಜನರೂ ಸ್ವೀಕರಿಸಿದಾಗ, ಇದು ಬರ್ಬರ ಸಭ್ಯತೆಯಸಾಲಿಗೆ ಸೇರಿಕೊಂಡಿತು.

ಮುಷ್ಟಿಯುದ್ಧ ಎಂದಿನಿಂದ ಆರಂಭವಾಯಿತು— ಎಂಬುದಕ್ಕೆ ಪ್ರಾಮಾಣಿಕವಾದ ಪುರಾವೆ ಇಲ್ಲವಾದರೂ ೧೭೧೯ ರಲ್ಲಿ ಜಾನ್ ಸ್ಲೀವನ್ ಹಾಗೂ 'ಜಿಮ್ ಕಾರ್ಬೆಟ್'ರ ನಡುವೆ ನಡೆದ ಸ್ಪರ್ಧೆಯಿಂದಲೇ ಈ ಆಟ ಆರಂಭವಾಯಿತೆಂದು

ಹೇಳಬಹುದು. ಬಿಳಿಯನಲ್ಲದ ವ್ಯಕ್ತಿಯೊಬ್ಬ ಈ ಪಂದ್ಯದಲ್ಲಿ ಜಯಗಳಿಸಿದುದು ಉಲ್ಲೇಖನೀಯ. ಅಂದಿನಿಂದಲೇ ಡೆಂಪಸೀ, ಲುಯಿಸ್, ಪ್ಯಾಟರಸನ್, ಮಹಮ್ಮದ್ ಅಲೀ (ಕ್ಯಾಸಿಯಸ್ ಕ್ಲೇ), ಟಾಯ್ಸನ್ ಮೊದಲಾದವರು ಈ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

ಏಳು ಅಂಕೆಗಳುಳ್ಳ (ದಶಲಕ್ಷ) ಹಣದ ಪುರಸ್ಕಾರ ಪಡೆದ ಮೊದಲ ಆಟಗಾರ ಟೆನ್ನಿ. ಅಂದಿನಿಂದ ಮುಷ್ಟಿಯುದ್ಧದಲ್ಲಿ ದೊಡ್ಡ ಮೊತ್ತದ ಪುರಸ್ಕಾರ ಸಿಗತೊಡಗಿತು. ಈ ಆಟ ಅದೆಷ್ಟು ಭಯಾನಕವಾಗಿದೆಯೆಂದರೆ ಕೆನಡಾದ ಆಟಗಾರ ಜಾನ್ ಸ್ಲೀವನ್ ಇದನ್ನು ಉದ್ಯೋಗವಾಗಿ ಮಾಡಿಕೊಳ್ಳುವ ಮುನ್ನ ೫೨ ಎದುರಾಳಿಗಳನ್ನು ಅಮೇರಿಕೆಯ ಆಟಗಾರ ವರ್ಜಿಲ್‌ಹಿಲ್ ೫೪ ಆಟಗಾರರನ್ನು ಮೂರ್ಛೆಗೊಳಿಸಿದ್ದರು. 'ನಾಕ್ ಔಟ್' ಮಾಡುವುದು ಈ ಆಟದ ಕೊನೆಯಹಂತ. ಎದುರಾಳಿ ಕಣದಲ್ಲಿ ಬಿದ್ದು ೧೦ ರವರೆಗೆ ಲೆಕ್ಕಿಸುವಾಗಲೂ ಎಳೆದಿದ್ದರೆ ಈತ ಗೆದ್ದಂತೆಯೇ. ಕೆಲವೊಮ್ಮೆ ಗುದ್ದು ತಿಂದ ಆಟಗಾರ ಸಾಯುವುದೂ ಇದೆ. ಆಗ ಪ್ರೇಕ್ಷಕರು ಗೆದ್ದ ಆಟಗಾರನಿಗಾಗಿ ಚಪ್ಪಾಳೆ ತಟ್ಟುತ್ತಾರೆ!

**ಪ್ರೇಕ್ಷಕರ ಪ್ರತಿಕ್ರಿಯೆ**

ಮುಷ್ಟಿಯುದ್ಧದ ಈ ಪೈಶಾಚಿಕ ಆಟದ ಪ್ರಭಾವ ಆಟಗಾರರ ಹಾಗೂ ಪ್ರೇಕ್ಷಕರ ಮೇಲೆ ಹೇಗಾಗುತ್ತದೆ ಎಂಬುದರ ಬಗೆಗೂ ಸಾಕಷ್ಟು ಅಧ್ಯಯನ ನಡೆದಿದೆ. ಮುಷ್ಟಿಪ್ರಹಾರದಿಂದ ಹೆಚ್ಚಿನ ಮುಷ್ಟಿಯೋಧರ ಮಾನಸಿಕ ಸಮತೋಲನ ತಪ್ಪಿಹೋಗುತ್ತದೆ. ಮೈದಾನದ ಹೊರಗೂ ಅವರು ಮಾತು ಮಾತಿಗೆ ಸಿಡಿದೇಳುತ್ತಾರೆ. ಮತ್ತು ತಮ್ಮ ಸಂಬಂಧಿಕರನ್ನು ಥಳಿಸುತ್ತಾರೆ.

ನಮ್ಮ ದೇಶದ ಉದಾಹರಣೆಯನ್ನೇ ತೆಗೆದುಕೊಳ್ಳಿರಿ. ಕಳೆದಬಾರಿ ಭಾರತದ ರಾಜ್ಯಮಟ್ಟದ ಮುಷ್ಟಿಯೋಧ ಕೋಟಾದ ಮಹಾವೀರ ಪ್ರಸಾದಗೌಡ ತನ್ನ ಮಾವ ದೇವಕೀನಂದನಶರ್ಮಾನ ಮೇಲೆ ಅಕಸ್ಮಾತ್ ಸಿಟ್ಟಿಗೆದ್ದು ಅವನನ್ನು ಚೆನ್ನಾಗಿ ಗುದ್ದಿದ. ಪರಿಣಾಮವಾಗಿ ಮಾವ ಸ್ಥಳದಲ್ಲೇ ಸತ್ತು ಬಿದ್ದ. ಮುಂದೆ ಪೋಲೀಸರು ಮಹಾವೀರನನ್ನು ಬಂಧಿಸಿ ಜೈಲಿಗೆ ಹಾಕಿದರು.

ಘಾತಕ ಮುಷ್ಟಿಪ್ರಹಾರ ಆಟಗಾರರ ಮೇಲೂ ದುಷ್ಪರಿಣಾಮ ಬೀರುವುದು ರಂಗದಲ್ಲೇ ಎಚ್ಚರ ತಪ್ಪುವವರ ವಿಚಾರ ಬಿಟ್ಟರೂ ಉಳಿದವರು ಕೂಡ ಶಾರೀರಿಕ ಹಾಗೂ ಮಾನಸಿಕ ದೃಷ್ಟಿಯಿಂದ ದುರ್ಬಲರಾಗುತ್ತಾರೆ. ಕೈಕಾಲು ನಡುಕ, ಉಗ್ಗುವುದು, ಜಗಳಗಂಟೆತನ, ಮತ್ಸರ ಪ್ರಭಾವ- ಇವು ಈ ಮುಷ್ಟಿಪ್ರಹಾರದ ದುಷ್ಪರಿಣಾಮಗಳು.



ವಿಜೇತ ಮುಷ್ಟಿಯೋಧ ಟಾಯ್ಸನ್‌ನ್ನನೇ ತೆಗೆದುಕೊಳ್ಳಿರಿ. ಆತ ಅಮೇರಿಕನ್ ನಟಿ ರೋಬಿನ್ ಗಿಬ್ಸನಳನ್ನು ೭-೨-೧೯೮೮ ರಂದು ಮದುವೆಯಾದ. ಮರುವರ್ಷ ಫೆಬ್ರವರಿಯಲ್ಲೇ ವಿಚ್ಛೆದನವನ್ನು ಪಡೆದುಕೊಂಡ ತನ್ನನ್ನು ಆತ ಅಮಾನುಷವಾಗಿ ಹೊಡೆಯುತ್ತಾನೆಂದು ರೋಬಿನ್ ಗಿಬ್ಸನ್‌ಳ ಆರೋಪ. ಅವನು ಕಣದಲ್ಲಷ್ಟೇ ಅಲ್ಲ ಸಾರ್ವಜನಿಕ ಜೀವನದಲ್ಲೂ ಭಯಂಕರ ಹೋರಾಟಗಾರನಾಗಿದ್ದು ಎದುರಾಳಿಯನ್ನು ಮಣ್ಣು ಮುಕ್ಕಿಸುವುದೇ ತನ್ನ ಏಕಮಾತ್ರ ಉದ್ದೇಶವೆಂದು ಭಾವಿಸುತ್ತಾನೆ.

ಚಿಂತಾಗ್ರಸ್ತ ಸ್ಥಿತಿಯಲ್ಲೇ ಒಮ್ಮೆ ಟಾಯ್ಸನ್ ಟೆಲಿವಿಜನ್‌ದ ಕ್ಯಾಮರಾಮ್ಯಾನನ ಮೇಲೂ ದಾಳಿಯಿಟ್ಟ. ಟಾಯ್ಸನ್ ನಂತಹ ಉದ್ವೇಗ್ರಭರಿತ ಮನಸ್ಥಿತಿಯ ವ್ಯಕ್ತಿಯನ್ನು ಬಿಟ್ಟು ರೂ ೬೦% ರಿಂದ ೮೭% ರಷ್ಟು ಮುಷ್ಟಿಯೋಧರು ಮೆದುಳು ರೋಗಕ್ಕೀಡಾಗಿದ್ದಾರೆಂದು ಅಮೇರಿಕೆಯ ಮೆಡಿಕಲ್ ಅಸೋಸಿಯೇಶನ್‌ದ ಪತ್ರಿಕೆಯ ಹೇಳಿಕೆ.

ಮುಷ್ಟಿಯೋಧರ ಮನೋವೃತ್ತಿ ಅದೆಷ್ಟು ಹಿಂಸಕವೆಂದು ಅವರು ಬಳಸುವ ಭಾಷೆಯಿಂದ ವ್ಯಕ್ತವಾಗುತ್ತದೆ. ವಿಶ್ವವಿಖ್ಯಾತ ಕ್ಯಾಸಿಯಸ್ ಕ್ಲೇ ಉರ್ಫ ಮಹಮ್ಮದ್ ಅಲೀ ಫ್ಲಾಯ್ಡ್ ಪ್ಯಾಟರಸನ್ ನೊಡನೆ ಹೋರಾಡಲು ಹೊರಡುವ ಮುನ್ನ ಹೀಗೆಂದಿದ್ದ. ನಾನು ಅವನನ್ನು ಅದೆಷ್ಟು ಜೋರಾಗಿ ಹೊಡೆಯುವೆನೆಂದರೆ ಮುಂದೆ ತನ್ನ ತಲೆಗೆ ಟೊಪ್ಪಿ ಹಾಕಿಕೊಳ್ಳಲೂ ಅವನು ಇನ್ನೊಬ್ಬನನೆರವು ಪಡೆಯಬೇಕಾಗುವುದು! ಲಾಯ್ಡ್ ಹನಿಕನ್ ಮತ್ತು ಗ್ರೇ ಹೋಗನ್ ಕೂಡ ಒರಟಾಗಿ ನಾವು ನಮ್ಮ ಎದುರಾಳಿಗಳನ್ನು ಮುಗಿಸಿ ಬಿಡಲೆಂದೇ ಕಣಕ್ಕಿಳಿಯುವೆವು! ಎಂದಿದ್ದರು.

ಟಾಯ್ಸನ್ ರಿಂಗ್‌ದ ಹೊರಗೂ ತನ್ನ ಆವೇಶಮಯ ವರ್ತನೆಗೆ ಪ್ರಸಿದ್ಧ. ಡಿ. ಅಮೇತೋ ತನ್ನನ್ನು ಅಪರಾಧಿ ಜೀವನದಿಂದ ಹೊರತಂದು ವಿಶ್ವವಿಖ್ಯಾತ ಮುಷ್ಟಿಯೋಧನನ್ನಾಗಿ ಮಾಡಿಸದೆ ಹೋಗಿದ್ದರೆ ತಾನು ಯಾವುದೇ ಜೈಲಿನಲ್ಲಿ ಕೊಳೆಯುತ್ತಿದೆನೆಂದು ಹೇಳುತ್ತಾನೆ.

ಅಮೇರಿಕೆಯ ಮುಷ್ಟಿಯೋಧ ಡೇವಿಸ್ ತನ್ನ ಮುತ್ತಜ್ಜನಕೊಲೆ, ಅಗ್ನಿಕಾಂಡ ಹಾಗೂ ಸುಲಿಗೆಯ ಆರೋಪಕ್ಕೀಡಾದ ಡೇವಿಸ್ ತನ್ನ ಮುತ್ತಜ್ಜ ಬ್ರಾಯಂಟ್ ನೊಡನೆ ಕೊಕೇನ್ ಕೊಳ್ಳಲು ಹಣ ಬೇಡಿದ. ಬ್ರಾಯಂಟ್ ಕೊಡಲೊಪ್ಪದಾಗ ಡೇವಿಸ್ ಅವನನ್ನು ಹೊಡೆದು ಹಣ ಕಸಿದುಕೊಂಡ; ಮತ್ತು ಮನೆಗೆ ಉರಿಹಚ್ಚಿದ. ಹೊಡೆತ ಹಾಗೂ ಬೆಂಕಿಯ ಹೊಗೆಯಿಂದ ಉಸಿರುಗಟ್ಟಿದ ಬ್ರಾಯಂಟ್ ತಕ್ಷಣ ಸತ್ತು ಹೋದ. ತನಗೆ ಹುಚ್ಚು ಹಿಡಿದಿರುವುದರಿಂದ ತನ್ನನ್ನು ಬಿಡುಗಡೆ ಮಾಡುವಂತೆ ಡೇವಿಸ್ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿದ. ಆದರೆ ನ್ಯಾಯಾಲಯ ಅವನ ಅರ್ಜಿಯನ್ನು ತಿರಸ್ಕರಿಸಿತು.

ಈ ಎಲ್ಲ ಉದಾಹರಣೆಗಳೂ ಈ ಆಟದ ಸಾಂಸ್ಕೃತಿಕ ಮಟ್ಟದ ದ್ಯೋತಕ. ಮಾಜಿ ಮುಷ್ಟಿಯೋಧನೊಬ್ಬ ಇಂದೂ ನ್ಯೂಜರ್ಸಿಯ ಕಾರಾಗೃಹದಲ್ಲಿ ೩೦ ವರ್ಷಗಳ ಶಿಕ್ಷೆ ಅನುಭವಿಸುತ್ತಿದ್ದಾನೆ.

ಇಂಥ ಹಿಂಸ್ರ ಆಟವನ್ನು ನೋಡುವ ಜನರೂ ತಮ್ಮಲ್ಲಿ ಹುದುಗಿದ ಹಿಂಸೆ ಪ್ರವೃತ್ತಿಯನ್ನು ತಪ್ಪದೆ ಪ್ರಕಟಿಸುತ್ತಾರೆ. ಈ ಆಟದ ಮೂಲಕ ಬಡ ಹಾಗೂ ಅಲ್ಪಸಂಖ್ಯಾತ ಜನರು (ಅಮೇರಿಕೆಯಲ್ಲಿರುವ ಕರಿಯರು) ತಮ್ಮ ಅಸ್ತಿತ್ವವನ್ನು ಜಗತ್ತಿನಲ್ಲಿ ಮೆರೆಸುತ್ತಾರೆಂದು ಮುಷ್ಟಿಯೋಧರ ಸಮರ್ಥಕರು ಹೇಳುತ್ತಾರೆ. ಆದರೆ ಇದು ಸಮರ್ಥನೀಯವಲ್ಲ. ಲಾಸ್ ಏಂಜಲ್ಸ್ ಅಥವಾ ಸೋಲ್ ಒಲಿಂಪಿಕ್‌ದಲ್ಲಿ ಈ ಆಟದಿಂದಾಗಿ ಮಧ್ಯವರ್ತಿಗಳಿಗೆ ಕೋಟ್ಯಂತರ ರೂಪಾಯಿ ಲಾಭವಾಗಿರುವುದರಿಂದ ಆ ಜನರು ಈ ಆಟಕ್ಕೆ ತಡೆಹೇರಲು ಒಪ್ಪರೆಂಬುದು ನಿಜ. ಆದರೆ ಈ ಆಟದ ಹಿಂಸೆ ಪ್ರವೃತ್ತಿಯಿಂದಾಗಿ ಎಷ್ಟೋ ದೇಶಗಳಲ್ಲಿ ಇದನ್ನು ಪ್ರತಿಬಂಧಿಸಲಾಗಿದೆ.

ಮುಂದಿನ ಒಲಿಂಪಿಕ್ ಕ್ರೀಡೆಗಳಲ್ಲಿ ಮುಷ್ಟಿ ಯುದ್ಧಕ್ಕೆ ಎಡೆದೊರೆಯಬಾರದೆಂದು ಎಷ್ಟೋ ಜನರು ಪ್ರಯತ್ನಿಸುತ್ತಿರುವಾಗಲೇ ಹವ್ಯಾಸಿ ಮುಷ್ಟಿಯೋಧರ ಅಂತರರಾಷ್ಟ್ರೀಯ ಅಸೋಸಿಯೇಶನ್ ಈ ಆಟದಲ್ಲಿ ಕಂಪ್ಯೂಟರ್ ಪ್ರಣಾಳಿಯನ್ನು ಅಳವಡಿಸಬೇಕೆಂದು ತೀರ್ಮಾನಿಸಿದೆ! ಸಾಧ್ಯವಿದ್ದಷ್ಟೂ ಮುಷ್ಟಿ ಯುದ್ಧವನ್ನು ರೋಮಾಂಚಕ ಹಾಗೂ ಆಕರ್ಷಕವಾಗಿ ಮಾಡುವುದೇ ಈ ಸಂಸ್ಥೆಯ ಉದ್ದೇಶ.

(ಹಿಂದಿಯಿಂದ)

---

**ಆಜೀವ ಸದಸ್ಯರುಗಳಲ್ಲಿ ಒಂದು ಮನವಿ.**

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಸಂಚಿಕೆಗಳು ಕೆಲವು ಸದಸ್ಯರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮ ಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಾಲಯಕ್ಕೆ ಕಳುಹಿಸಿ ಕೊಡುವುದರ ಮುಖೇನ "ಸಿದ್ಧಗಂಗಾ" ನಿಮಗೆ ಕ್ರಮವಾಗಿ ತಲುಪಲು ಸಹಕರಿಸಬೇಕಾಗಿ ಪ್ರಾರ್ಥನೆ. **ತಮ್ಮ ಸದಸ್ಯತ್ವದ ನಂಬರನ್ನು ತಪ್ಪದೇ ತಿಳಿಸಿರಿ.**

ಪ್ರಕಾಶಕರು.

---



# ಮಾನವನ ಗುರಿ

ಎ. ಬಿ. ಚನ್ನಬಸಪ್ಪ "ಎಫ್/1 ಬಸವ ಪ್ರಸಾದ" ಶಂಕರಮಠ ಕ್ರಾಸ್ II, ಕಿಲ್ಲೆ, ಮೈಸೂರು-4.

ಸದ್ಯಕ್ಕೆ ಕಂಡುಬರುವ ಪರಿಸರಗಳನ್ನು ನೋಡಿದರೆ ಮಾನವ ಮೇಲು ಮಟ್ಟದಲ್ಲಿರುವನು. ಚರಾಚರ ವಸ್ತುಗಳಿಗೆ ಒಡೆಯನಾಗಿರುವನು. ಭೂಮಿ ಮೇಲೆ, ಒಳಗೆ; ನೀರಿನ ಮೇಲೆ ಒಳಗೆ ಆಕಾಶದ ಕೆಲಗ್ರಹಗಳ ಪರಿಚಯ ಮಾಡಿಕೊಂಡು ಯಜಮಾನನ ಅಂತಸ್ಥಿನಲ್ಲಿರುವನು.

ಮಾನವ ಪ್ರಾಣಿಗಳ ಗುಂಪಿಗೆ ಸೇರಿದವನು. ಹುಲಿ, ಸಿಂಹ, ಚಿರತೆ, ದನ, ಕುರಿ, ಆಡು ಮೊದಲಾದವುಗಳು ಪ್ರಕೃತಿಯ ಧರ್ಮದಂತೆ ನಡೆಯುತ್ತಿರುವುವು. ಅವುಗಳ ಗುರಿ ಏನಿರಬಹುದೆಂದು ಊಹಿಸಿದರೆ, ಈ ಕಿರಿಯ ಲೇಖಣಿ ಅವುಗಳಿಗೆ ತಮ್ಮ ಹಸಿವನ್ನು ಇಂಗಿಸಿಕೊಳ್ಳುವುವೇ, ಅವುಗಳ ಗುರಿ; ಇವುಗಳ ಜೊತೆಯಲ್ಲೇ ಕಾಮದ ಓಕಳಿ ಹೊಂದುವುದೇ ಅವುಗಳಗುರಿ. ಇವುಗಳಿಗೆ ಇನ್ನು ಯಾವ ಗುರಿ? ಇದು ಅವುಗಳ ತಪ್ಪೇ? ಅಲ್ಲ. ಹಾಗಾದರೆ ಪ್ರಕೃತಿಯಧರ್ಮ ಈ ರೀತಿಯ ಕ್ರಮವನ್ನು ತಪ್ಪು ಎಂದು ಹೇಳಲು ಸಾಧ್ಯವಿಲ್ಲ. ಪ್ರಕೃತಿ (ದೇವರು)ಯು ಆ ನಿಯಮವನ್ನು ಇಟ್ಟಿರುವನು.

ಸಸ್ಯಗಳ ಕಡೆ ತಿರುಗಿ ನೋಡಿದರೆ ಪ್ರಕೃತಿಯ ಆಜ್ಞಾನುಸಾರ ನಡೆದುಕೊಳ್ಳುತ್ತಿರುವುವು. ಹುಣಸೆಮರ ಹುಣಸೆಹಣ್ಣು, ಬೇವಿನ ಮರ ಬೇವಿನಹಣ್ಣು, ಮಾವಿನ ಮರ ಮಾವಿನ ಹಣ್ಣು, ಸೀಬಿಗಿಡ ಸೀಬಿಯಹಣ್ಣು ಮೊದಲಾಗಿ ಸಸ್ಯಗಳ ಗುಂಪು ಆಜ್ಞಾನುಸಾರ ನಡೆಯುತ್ತಿರುವುವು. ಸ್ವತಃ ಅವುಗಳಿಗಿಲ್ಲ!

ಮಾನವ ಹಾಗಲ್ಲ. ವಿಚಿತ್ರವಾದ ಪ್ರಾಣಿ ತನ್ನದೇ ಆದ ಗುರಿ! ವಿಶ್ವದಲ್ಲಿ ಎಷ್ಟು ಮಾನವರು ಉಂಟೋ ಅಷ್ಟು ರೀತಿಯ ಗುರಿಗಳುಂಟು. ಏಕೆ ಹೀಗೆ? ಸ್ವಲ್ಪ ಆಲೋಚಿಸೋಣ! ಪ್ರಕೃತಿಯು ಈತನಿಗೆ ವಿಚಿತ್ರವಾದ ತಲೆ. ಆ ತಲೆಯಲ್ಲಿ ವಿಚಿತ್ರವಾದ ಮಿದುಳು. ಆದುದರಿಂದ ವಿಚಿತ್ರವಾದ ಆಲೋಚನೆ. ಆ ಆಲೋಚನೆಗಳಿಂದ ವಿಚಿತ್ರವಾದ ಕಾರ್ಯಕಲಾಪಗಳು (ಫಲಗಳು), ಆ ಕಾರ್ಯಗಳು ಧರ್ಮದ ಒರೆಗಲ್ಲಿನ ಮೇಲೆ ಒರೆ ಹಚ್ಚಿನೋಡಿದರೆ, ಕೆಲವು ಚಿನ್ನ; ಕೆಲವು ಕೋಟೆ.

ಮಾನವ ಹುಟ್ಟಿರುವುದು ಕೋಟೆ ಆಲೋಚನೆಗೆ ಅಲ್ಲ. ಆ ಕೋಟೆ ಆಲೋಚನೆಗಳಿಂದ ಹೊರ ಬೀಳುವ ಕೃತಿಗಳು ಕೋಟೆ. ಅಂಥಾ ಕೃತಿಗಳು ಮಾನವ ಕೋಟೆಯನ್ನು ನಾಶ ಮಾಡುತ್ತವೆಯೇ ಹೊರತು ಉನ್ನತಿಗೆ ತರಲಾರವು!

ಮೋಸ-ವಂಚನೆ-ಸುಳ್ಳು-ಕಳ್ಳತನ-ದರೋಡೆ- ಕೊಲೆ ಮೊಲಾದವುಗಳು ಅವುಗಳನ್ನು ಅನುಸರಿಸುವ ವ್ಯಕ್ತಿಗಳನ್ನು ಕಾಲಾನುಕಾಲಕ್ಕೆ ಹೀನ-ನಾಶ ಸ್ಥಿತಿಗೆ ತರುವುವು! ಹೀಗಿರುವುದೆ ಮಾನವನ ಗುರಿ. ಈ ಗುರಿಯನ್ನು ಸಾಧಿಸಲು ಪ್ರಕೃತಿ (ದೇವರು) ಯು ಮಾನವನಿಗೆ; ಯಾವ ಪ್ರಾಣಿಗೂ ಕೊಡದಂಥಾ ಮೆದುಳನ್ನು ಕೊಟ್ಟಿದ್ದು, ಈ ಕಾರ್ಯಗಳನ್ನು ಸಾಧಿಸಲು? ಎಲ್ಲಾದರೂ ಉಂಟೆ? ಆತನು ವಿಶ್ವದ ಯಜಮಾನ?

ಕೆಲ ಮಹನೀಯರು ಗುರಿಯನ್ನು ಸಾಧಿಸಲಿಲ್ಲವೆ? ಮಹಾತ್ಮಗಾಂಧಿಯವರು ಸ್ವತಂತ್ರ ಗುರಿ-ಅಂಬೇಡ್ಕರವರು ಹಿಂದುಳಿದವರನ್ನು ಮುಂದೆ ತರುವ ಗುರಿ, ಕೆನಡಿಯವರೂ ಕೂಡ ಆ ಗುರಿ, ಸುಭಾಸ್‌ಚಂದ್ರಭೋಸ್‌ರವರು ಗುಲಾಮತನವನ್ನು ಹೊಡೆದು ಓಡಿಸುವ ಗುರಿ; ಭಗತ್‌ಸಿಂಗ್, ಗುರುದೇವರುಗಳು, ನಾಡಿಗೋಸ್ಕರ ತಮ್ಮ ಆತ್ಮಗಳನ್ನು ಅರ್ಪಿಸುವ ಗುರಿ' ಸಾಧಿಸಿದರು. ಆ ರೀತಿಯ ಗುರಿಗಳೇ ಮಾನವನ ಗುರಿಯಾಗಿರಬೇಕು! ಅಂಥ ಗುರಿ ಸಾಧಿಸಲು ಕಂಕಣ-ಬದ್ಧರಾಗೋಣ!

---

ಸಿರಿಯು ಭಕ್ತ್ಯಂಗನೆಯುನುರದೊಳುಜಯಸತಿಯು
ವರಭುಜದೊಳು, ದಯಾಸತಿಯು ಮುಖದೊಳತಿಶಾಂತಿ
ತರುಣಿಯಾಮನದೊಳೆಡೆವಿಡದಪ್ಪಿ ನೆರೆವುದಲ್ಲದೆ ಮತ್ತೆ ಪರನಾರಿಗೆ
ತೆರವನಟ್ಟುವನಿವನ ಬೇಟದೊಳು ಕಣ್ಣಾಣ
ದಿರದೆ ಕೈವಿಡಿದೆನ್ನನೂಂಕಿ ಕಳೆದಂಮಹಾ
ಪುರುಷರರಿದಿರ್ರಿ ಸಿದ್ಧರಾಮನೆಂಬಾ ಕೀರ್ತಿವಧು ದೂರಿದಳು ಜಗದೊಳು ||

ಆಧಾರ-ಸಮರ್ಪಣೆ.

**ಪರಿಹಾರ**

ಶ್ರೀ ಮಠದ ವ್ಯಾಪ್ತಿಗೆ ಸೇರಿದ ಕ್ಯಾತ್ಸಂದ್ರ ನಿವೇದಿತಾ ಪ್ರೌಢಶಾಲೆಯಲ್ಲಿ ಸೇವಕನಾಗಿ ಕೆಲಸ ಮಾಡುತ್ತಿದ್ದ ಮಹದೇವಯ್ಯ ಶಿವೈಕ್ಯರಾದ ಪ್ರಯುಕ್ತ ಶ್ರೀ ಸಿದ್ಧಗಂಗಾ ಶಿಕ್ಷಣ ಸಂಸ್ಥೆಗಳ ಕುಟುಂಬ ಕಲ್ಯಾಣ ನಿಧಿಯಿಂದ ನೀಡಿದ 10,000/- ರೂಗಳ ಚೆಕ್ಕನ್ನು ಮೃತರ ಪತ್ನಿಯಾದ ಶ್ರೀಮತಿ ಶಾರದಮ್ಮನವರು ತುಮಕೂರು ಜಿಲ್ಲಾ, ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ. ಪಿ. ಸುಬ್ಬರಾವ್ ಅವರಿಂದ 15 ಆಗಸ್ಟ್ 1991ರಂದು ಸ್ವೀಕರಿಸಿದರು.



# 45 ನೇ ಸ್ವಾತಂತ್ರ್ಯೋತ್ಸವ

## ಜನತೆಗೆ ನೀಡಿದ ಭರವಸೆಯ ಮಾರ್ಗದಲ್ಲಿ ಪ್ರಗತಿಯ ಮುನ್ನೋಟ.

ಜನತೆಯ ಆಶೋತ್ತರಗಳನ್ನು ಪೂರೈಸುವುದೇ ಜನಪ್ರಿಯ ಸರ್ಕಾರದ ಕರ್ತವ್ಯ. ಈ ದಿಕ್ಕಿನಲ್ಲಿ ಗ್ರಾಮೀಣ ಅಭಿವೃದ್ಧಿಗೆ ಹೆಚ್ಚು ಒತ್ತು ನೀಡುವ ಜೊತೆಗೆ ರಾಜ್ಯ ಸರ್ಕಾರವು ಹಲವಾರು ಕಲ್ಯಾಣ ಸ್ವಾತಂತ್ರ್ಯೋತ್ಸವ ಸಂದರ್ಭದಲ್ಲಿ ಒಂದು ಹೆಮ್ಮೆಯವಿಷಯವಾಗಿದೆ.

**ಆಶ್ರಯ :**
ಈ ಯೋಜನೆಯಡಿಯಲ್ಲಿ ಸಮಾಜದ ದುರ್ಬಲ ವರ್ಗದವರಿಗೆ ನಿವೇಶನಗಳನ್ನು ಹಂಚಲು ಮತ್ತು ಮನೆಗಳನ್ನು ನಿರ್ಮಿಸಲು ನೆರವು ನೀಡಲಾಗುವುದು.

**ಶುಶ್ರೂಷಾ :**
ಆರೋಗ್ಯವಂತ ಮಕ್ಕಳನ್ನು ರೂಪಿಸಲು ಕ್ರಾಂತಿಕಾರಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ ಹಾಗೂ ಆರುತಿಂಗಳಿಗೊಮ್ಮೆ ಎಲ್ಲಾ ವ್ಯಕ್ತಿಗಳಿಗೂ ಉಚಿತ ವೈದ್ಯಕೀಯ ತಪಾಸಣೆ ಮಾಡುವ ಯೋಜನೆ.

**ಅಕ್ಷಯ :**
ಗ್ರಾಮೀಣ ಪ್ರದೇಶದ ಮಕ್ಕಳನ್ನು ಉತ್ತಮ ವಿದ್ಯಾವಂತ ಪ್ರಜೆಗಳನ್ನಾಗಿ ರೂಪಿಸುವ ದೃಷ್ಟಿಯಿಂದ ಒಂದರಿಂದ ಏಳನೇ ತರಗತಿ ವರೆಗಿನ ಮಕ್ಕಳಿಗೆ ಪೌಷ್ಟಿಕವಾದ ಮಧ್ಯಾಹ್ನದ ಊಟ ನೀಡುವ ಕಾರ್ಯಕ್ರಮ.

**ವಿಶ್ವ :**
ಪರಂಪರಾನುಗತವಾಗಿ ಬಂದ ಗ್ರಾಮೀಣ ಜನತೆಯ ಕೌಶಲ್ಯಗಳನ್ನು ಬಳಸಿಕೊಳ್ಳುವುದರ ಮೂಲಕ ಉದ್ಯೋಗ ಸೃಷ್ಟಿಸುವ ಹೊಸ ಯೋಜನೆ. ಗ್ರಾಮೀಣ ಉದ್ಯೋಗಾಧಾರಿತ ಆರ್ಥಿಕ ಅಭಿವೃದ್ಧಿಗೆ ಇದೊಂದು ದಿಟ್ಟ ಹೆಜ್ಜೆ. ಸರ್ಕಾರವು 'ಸಾಮಾಜಿಕ ಭದ್ರತಾ ನಿಧಿ' ಯೊಂದನ್ನು ಸ್ಥಾಪಿಸಿದ್ದು ಮೊದಲನೆಯ ಹಂತದಲ್ಲಿ ಸುಮಾರು ಒಂದು ಲಕ್ಷ ನೇಕಾರರು ಮತ್ತು ಕುಶಲ ಕರ್ಮಿಗಳು ಈ ಯೋಜನೆಯ ಅನುಕೂಲ ಪಡೆಯುವರು.

**ಡಾ|| ಅಂಬೇಡ್ಕರ್ ಭವನ**
ಅಂಬೇಡ್ಕರ್ ಭವನ ನಿರ್ಮಾಣ ಹಾಗೂ ದಲಿತ ವರ್ಗಗಳ ಪ್ರಗತಿಗೆ ಎಲ್ಲಾ ವಿಧದಲ್ಲೂ ಹೆಚ್ಚು ನೆರವು. ಪರಿಶಿಷ್ಟ ಜಾತಿ ಮತ್ತು ಜನಾಂಗದವರಿಗೆ ಮನೆಗಳನ್ನು ನೀಡಲು 'ಲಕ್ಷ ಗೃಹ ನಿರ್ಮಾಣ' ಎಂಬ ಅಭೂತಪೂರ್ವ ಯೋಜನೆಯೊಂದನ್ನು ಹಮ್ಮಿಕೊಂಡಿದೆ.

**ನೀರಾವರಿ ಮತ್ತು ವಿದ್ಯುತ್ ಉತ್ಪಾದನೆ :**

ಭಾರಿ ಮತ್ತು ಮಧ್ಯಮ ನೀರಾವರಿಗೆ 190 ಕೋಟಿ ರೂ. ಮೀಸಲು 69, 07 ಪಂಪ್‌ಸೆಟ್‌ಗಳಿಗೆ ವಿದ್ಯುತ್ ಒದಗಿಸಿದ ಒಂದು ಹೊಸ ದಾಖಲೆಯನ್ನು ಸ್ಥಾಪಿಸಿದೆ. ಹೆಚ್ಚು ವಿದ್ಯುತ್ ಉತ್ಪಾದಿಸಲು ಖಾಸಗಿ ಉದ್ದಿಮೆಗಳಿಗೆ ರಾಜ್ಯ ಸರ್ಕಾರವು ಹೆಚ್ಚಿನ ಸಹಕಾರ ಹಾಗೂ ಉತ್ತೇಜನ ನೀಡುವುದು.

**ಅರಾಧನ :**

ಹರಿಜನ ಕೇರಿಗಳು, ಲಂಬಾಣಿ ತಾಂಡಾಗಳು, ಒಡ್ಡರ ಕೇರಿಗಳು ಇಂತಹಸ್ಥಳಗಳಲ್ಲಿ ದೇವಸ್ಥಾನಗಳು ಮತ್ತು ಪೂಜಾ ಮಂದಿರಗಳ ನಿರ್ಮಾಣಕ್ಕೆ ಜೀರ್ಣೋದ್ಧಾರ ಮಾಡಲು ಸರ್ಕಾರದ ನೆರವು.

**ಅಕ್ರಮ ಸಾಗುವಳಿಯ ಸಕ್ರಮ :**

ಅಧಿನಕೃತ ಸಾಗುವಳಿಯನ್ನು ಸಕ್ರಮಗೊಳಿಸಿ ಹಕ್ಕು ಪತ್ರ ನೀಡಲಾಗುವುದು. ಬಗರ್ ಹುಕುಂ ಸಾಗುವಳಿ ಮಾಡುತ್ತಿದ್ದ ಗ್ರಾಮೀಣ ದರ್ಬಲರು ಪರಿಶಿಷ್ಟ ಜಾತಿ ಮತ್ತು ಪಂಗಡದವರ ಜಮೀನನ್ನು ಸಕ್ರಮ ಗೊಳಿಸಲು ಕ್ರಾಂತಿಕಾರಿ ನಿಲುವನ್ನು ಸರ್ಕಾರ ತೆಗೆದುಕೊಂಡಿದೆ.

**ಸಣ ಕೈಗಾರಿಕೋದ್ಯಮ :**

ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚು ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಸ್ಥಾಪಿಸಲು ನಿರ್ಧರಿಸಲಾಗಿದೆ.

**ಮಹಿಳೆಯರಿಗೆ ಮೀಸಲಾತಿ :**

ಸರ್ಕಾರಿ ಇಲಾಖೆ ಮತ್ತು ಸಾರ್ವಜನಿಕ ಉದ್ದಿಮೆಗಳಲ್ಲಿ ಶೇ: 30 ರಷ್ಟು ಮಹಿಳೆಯರಿಗಾಗಿ ಉದ್ಯೋಗ ಮೀಸಲಿಡಲು ಸರ್ಕಾರ ನಿರ್ಧರಿಸಲಾಗಿದೆ.

**ಕುಡಿಯುವ ನೀರು :**

ಪ್ರತಿಯೊಂದು ಹಳ್ಳಿಗೂ ಕುಡಿಯುವ ನೀರು ಇತ್ಯಾದಿ ಸೌಲಭ್ಯಗಳನ್ನು ಒದಗಿಸಲಾಗುವುದು.

**ಸಾಕ್ಷರತಾ ಕಾರ್ಯಕ್ರಮ :**

ಹಳ್ಳಿಗಳಲ್ಲಿ ಅವಿದ್ಯಾವಂತ ವಯಸ್ಕರಿಗೆ ವಿದ್ಯಾಭ್ಯಾಸ ಕಲಿಸುವ ಯೋಜನೆ.

---

* ಐಕ್ಯತೆ, ಕೋಮು ಸೌಹಾರ್ದತೆ, ಸಹ ಬಾಳ್ವೆ, ಸಮತಾವಾದ ಇವೆಲ್ಲವನ್ನು ಆಚ
* ರಣೆಗೆ ತರುವುದು ಸ್ವಾತಂತ್ರ್ಯದ ಗುರಿ. ಇಂದು ಇದೇ ನಮ್ಮೆಲ್ಲರ ಪ್ರತಿಜ್ಞೆ ಯಾಗಲಿ.

---



## ಕ್ಷೇತ್ರವಾರ್ತೆ

### 45 ನೇ ಸ್ವಾತಂತ್ರೋತ್ಸವ ದಿನಾಚರಣೆ.

—ಹೆಚ್. ಬಿ. ಗಂಗಾಧರಯ್ಯ.

ಶ್ರೀ ಮಠದ ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಸ್ವಾತಂತ್ರದಿನಾಚರಣೆಯನ್ನು 15 ಆಗಸ್ಟ್ 1991 ಗುರುವಾರ ಪ್ರಾತಃ ಕಾಲ 7 ಗಂಟೆಗೆ ಧ್ವಜಾರೋಹಣ ಮಾಡುವುದರ ಮೂಲಕ ಆಚರಿಸಲಾಯಿತು. ಲೋಕಸಭೆಗೆ ಹೊಸದಾಗಿ ಉಪಸಭಾಪತಿಯಾಗಿ ಆಯ್ಕೆಯಾಗಿರುವ ತುಮಕೂರು ಲೋಕಸಭಾ ಸದಸ್ಯರಾದ ಶ್ರೀ ಎಸ್. ಮಲ್ಲಿಕಾರ್ಜುನಯ್ಯನವರು ಧ್ವಜಾರೋಹಣ ಮಾಡಿ ವಿವಿಧ ವಿದ್ಯಾಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ [illegible],000 ಸಾವಿರ ವಿದ್ಯಾರ್ಥಿಗಳಿಂದ ನಡೆದ ಒಂದು ಗಂಟೆ ದೀರ್ಘ ಕಾಲ ಪಥ ಚಲನೆಯಲ್ಲಿ ವಂದನೆಸ್ವೀಕರಿಸಿದರು. ಅವರು ಮಾತನಾಡುತ್ತ ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ|| ಶ್ರೀ ಶಿವಕುಮಾರಮಹಾಸ್ವಾಮಿಗಳವರ ದರ್ಶನಾಶೀರ್ವಾದಕ್ಕಾಗಿ ಶ್ರೀಮಠಕ್ಕೆ ಬಂದೆ. ಇಂದು ಐತಿಹಾಸಿಕವಾಗಿ ವೈಯಕ್ತಿಕವಾಗಿ ಪುಣ್ಯದಿವಸವಾಗಿದೆ. ಭಾರತದ ಮೂಲೆ ಮೂಲೆಗಳಲ್ಲೂ ಶ್ರೀ ಮಠದ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಾಸಂಗಮಾಡಿದ ಪ್ರತಿಭಾನ್ವಿತರನ್ನು ನಾನು ಕಾಣುತ್ತಿದ್ದೇನೆ. ಉತ್ತರ ಭಾರತದ ಶ್ರೀ ಮೌರ್ಯ ಎಂಬುವರು ಲೋಕಸಭಾಸದಸ್ಯರಾಗಿ ನನ್ನ ಸಹೋದ್ಯೋಗಿಯಾಗಿದ್ದಾರೆ. ಅವರು ಆಗಾಗ್ಗೆ ಪೂಜ್ಯ ಶ್ರೀ ಶ್ರೀ ಗಳವರನ್ನು ಮತ್ತು ವ್ಯಾಸಂಗ ಮಾಡಿದ ಸಿದ್ಧಗಂಗಾ ತಾಂತ್ರಿಕ ವಿದ್ಯಾಲಯವನ್ನು ಸ್ಮರಿಸುತ್ತಿರುತ್ತಾರೆ.

ಜೀವನದಲ್ಲಿ ದೀನದಲಿತರಿಗೆ ಆಶ್ರಯವಿದೆ ಎಂದರೆ ಭಾರತದಲ್ಲಿ ಶ್ರೀ ಸಿದ್ಧಗಂಗಾ ಮಠ. ಇದಕ್ಕಾಗಿ ಪೂಜ್ಯ ಶ್ರೀ ಶ್ರೀಗಳು ದಿನದ 20 ಘಂಟೆಗಳು ಕ್ರಿಯಾಶೀಲರಾಗಿ ತ್ಯಾಗಿಗಳಾಗಿದ್ದಾರೆ. ಇಂಥಹ ಮಹಾಚೇತನಕ್ಕೆ ನಾವು ಮತ್ತು ರಾಷ್ಟ್ರ ಭಕ್ತಿ ಪೂರ್ವಕ ಕೃತಜ್ಞತೆಗಳನ್ನು ಎಲ್ಲಾ ಕಾಲಕ್ಕೂ ಸಮರ್ಪಿಸಬೇಕು

ಇಂದು ಸ್ವಾತಂತ್ರ್ಯ ದಿನದ ನೆನಪು ಮಾಡಿಕೊಳ್ಳುತ್ತಿದ್ದೇವೆ. ಸ್ವಾತಂತ್ರ್ಯದ ಫಲ ಅನಕ್ಷರತೆ, ಶಾಂತಿ, ಕ್ರೌರ್ಯ ಭಾವನೆ, ಕೊಲೆ ಮುಂತಾದ ಅಜ್ಞಾನ, ಬಡತನ, ಅಕೃತ್ಯಗಳಾಗಿವೆ. ಇವುಗಳಿಂದ ವಿಮುಕ್ತರಾಗಲು ದೇಶಾಭಿಮಾನ, ರಾಷ್ಟ್ರಪ್ರಜ್ಞೆ, ಸಹಕಾರ ಬಾಳ್ವೆ, ಮಾನವೀಯ ಮೌಲ್ಯಗಳ ಬೆಳವಣಿಗೆಗಳ ಬಗ್ಗೆ ಚಿಂತನಮಾಡಿದಾಗ ನಮ್ಮ ಭಾರತ ಸರ್ವತೋಮುಖ ಸಮೃದ್ಧ ರಾಷ್ಟ್ರವಾಗುತ್ತದೆ ಎಂದು ಹೇಳಿದರು.

ಮುಖ್ಯ ಅತಿಥಿಯಾಗಿ ತುಮಕೂರು ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಉಪನಿರ್ದೇಶಕರಾದ ಶ್ರೀ ಶಿವಬಸಪ್ಪನವರು, ಮಾತನಾಡಿ ಶ್ರೀ ಶ್ರೀಗಳವರು ಹೊಸ ಹೊಸ ಸಾಧನೆಗಳನ್ನು ಮಾಡುತ್ತಾ ಸಮಾಜ ಸೇವೆಗೆ ಸಮರ್ಪಿಸಿಕೊಂಡಿದ್ದಾರೆ. **ಇಂಥ ತ್ಯಾಗ ಮೂರ್ತಿಗೆ ರಾಷ್ಟ್ರಮಟ್ಟದ ಭಾರತರತ್ನ ಪ್ರಶಸ್ತಿ ನೀಡಬೇಕು** ಎಂದು ಆಶಿಸಿದರು.

ರತ್ನಪ್ರಾಯವಾದ ಸ್ವಾತಂತ್ರ್ಯ ಲಕ್ಷಾಂತರ ಜನಗಳ ತ್ಯಾಗ ಬಲಿದಾನದಿಂದ ದೊರಕಿದೆ.
ಶ್ರೀ ಮಠದ ಹಿನ್ನೆಲೆಯಲ್ಲಿ ಬೆಳೆಯುತ್ತಿರುವ ವಿದ್ಯಾರ್ಥಿಗಳು ಉಜ್ವಲವಾದ ರಾಷ್ಟ್ರ-
ಪ್ರೇಮ ಉಳ್ಳವರಾಗಿ' ಒಳ್ಳೆಯ ಆದರ್ಶಭಾವನೆಗಳನ್ನು ಬೆಳಸಿಕೊಳ್ಳಲು ಪಣತೊಡ
ಬೇಕೆಂದು ನುಡಿದರು.

ಸಮಾರಂಭದ ಅಧ್ಯಕ್ಷತೆವಹಿಸಿದ್ದ ತುಮಕೂರು ಜಿಲ್ಲೆ ಶಿಕ್ಷಣ ಉಪನಿರ್ದೇಶಕ
ರಾದ ಶ್ರೀ ಪಿ. ಸುಬ್ಬರಾವ್ ಮಾತನಾಡಿ ಸ್ವಾತಂತ್ರ್ಯದ ಬೆಲೆಯನ್ನು ನಾವು ಅರಿಯ
ಬೇಕು. ಪರಕೀಯರ ದಾಸ್ಯದಲ್ಲಿ ಬದುಕಿದ್ದ ಜನತೆ ನಿಕೃಷ್ಟವಾದ ದುರ್ಭರ ಜೀವನ
ಸಾಗಿಸುತ್ತಿತ್ತು. ಸ್ವಾತಂತ್ರ್ಯ ಮತ್ತು ಅಧಿಕಾರಬಂದಾಗ ನಮ್ಮ ನಡವಳಿಕೆಗಳು
ಉದಾತ್ತವಾಗಿರಬೇಕು. ಸಂಪತ್ತಿನ ವಿತರಣೆಯಲ್ಲಿ ಸಮಾನತೆ, ಅಜ್ಞಾನ, ಅನಕ್ಷರತೆ
ನಿವಾರಿಸುವಲ್ಲಿ ಎಲ್ಲರೂ ಶ್ರಮಿಸಬೇಕು. ಸ್ವಾತಂತ್ರ್ಯಕ್ಕೆ ಬಲಿಯಾದ ಹುತಾತ್ಮರನ್ನು
ಸ್ಮರಿಸಿ ವಂದನೆ ಸಲ್ಲಿಸಬೇಕೆಂದರು.

ಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಾ ಸ್ವಾತಂತ್ರ್ಯದ ಅವಧಿ
44 ವರ್ಷಗಳು ತುಂಬಿ 45ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. 1947 ಆಗಸ್ಟ್
ಮಧ್ಯರಾತ್ರಿ ಸ್ವಾತಂತ್ರ್ಯಘೋಷಣೆಯಾಯಿತು. ಇದು ಕೇವಲ ರಾಜಕೀಯ ಸ್ವಾತಂತ್ರ್ಯ
ವಾಯಿತೇ ವಿನಃ ರಾಷ್ಟ್ರೀಯ ಸ್ವಾತಂತ್ರ್ಯವಲ್ಲ. ಇಂದು ನಾವು ಸಮಸ್ಯೆಗಳ ಸುಳಿಯ
ಲ್ಲಿದ್ದೇವೆ, ಧರ್ಮ ನಶಿಸಿಹೋಗಿದೆ. ಬಡತನ, ಅಜ್ಞಾನ ವಿಪುಲವಾಗಿ ಬೆಳೆದಿದೆ. ಏಳುಪಂಚ
ವಾರ್ಷಿಕ ಯೋಜನೆಗಳು ಮುಗಿದರೂ ಈಬಗ್ಗೆ ಗುರಿಮುಟ್ಟಿಲ್ಲ. ನಾಲ್ಕು ದಶಕ ಕಳೆದರೂ
ಪರಿಸ್ಥಿತಿ ಗಂಭೀರವಾಗಿ ಉಳಿದಿದೆ. ಗಾಂಧಿಜೀಯವರ ಇಚ್ಛೆ ರಾಮರಾಜ್ಯ ಸ್ಥಾಪನೆ,
ಉ.ದಾ. ಜಪಾನ್ ದೇಶ ಮಹಾಯುದ್ಧಕ್ಕೆ ಗುರಿಯಾದ ಅಲ್ಪ ಕಾಲದಲ್ಲಿ ಸಾಧಿಸಿರುವ
ಪ್ರಗತಿ ಜಗತ್‌ವಿಖ್ಯಾತವಾಗಿದೆ. ಈರೀತಿ ನಮ್ಮ ರಾಷ್ಟ್ರ ಸಂಮೃದ್ಧಿಯಾಗಬೇಕಾದರೆ
ಎಲ್ಲರೂ ಅವರವರ ಸ್ಥಾನದಲ್ಲಿ ಸಮರ್ಪಣ ಭಾವದಿಂದ ಕರ್ತವ್ಯಗಳನ್ನು ಯೋಗ್ಯ
ರೀತಿಯಲ್ಲಿಮಾಡಬೇಕು.

ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವಗಳ ಅರ್ಥ ಶಾಂತಿ ನೆಮ್ಮದಿಯಿಂದ
ಎಲ್ಲರೂ ಪ್ರಗತಿಯಾಗಬೇಕು.

Democracy is the Peaceful living and Progress of all.
ಭಾರತ ಖಂಡ ಎಲ್ಲರಿಗೂ ಕಲ್ಯಾಣಬಯಸಿ ಮಾರ್ಗದರ್ಶನ ಮಾಡಿದೆ. ಮಹೋನ್ನತ
ಸಂದೇಶವನ್ನು ಅರಿತು ಮುನ್ನಡೆಯಬೇಕೆಂಬ ಆತ್ಮವಿಶ್ವಾಸವನ್ನು ಹೊಂದಬೇಕು.
ಎಂದು ನುಡಿದರು. **ಸ್ವಾತಂತ್ರ್ಯೋತ್ಸವದ ಮಹತ್ವವನ್ನು** ಪ್ರತಿಬಿಂಬಿಸುವಂಥ
ಸಾಂಸ್ಕೃತಿಕ ಚಟುವಟಿಕೆಗಳನ್ನು ಶ್ರೀ ಮಠದ ಸನಿವಾಸ ಶಿಕ್ಷಣ ಸಂಸ್ಥೆಗಳ ವಿದ್ಯಾರ್ಥಿ
ಗಳು, ವಿದ್ಯಾರ್ಥಿನಿಯರು ಉತ್ತಮವಾಗಿ ಪ್ರದರ್ಶಿಸಿದರು. ಈ ಸಮಾರಂಭದ
ಪ್ರಾರಂಭದಲ್ಲಿ ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ವಿದ್ಯಾಲಯದ ಪ್ರಾಂಶುಪಾಲರಾದ
ಶ್ರೀ ಎಸ್.ಪಿ. ಶಿವಶಂಕರ್ ಸ್ವಾಗತಕೋರಿದರು ಪ್ರೌಢಶಾಲಾ ಶಿಕ್ಷಕರಾದ ಶ್ರೀ ಪಿ.ಆರ್.
ಸೋಮಶೇಖರ್ ವಂದಿಸಿದರು.

(2 ನೇ ರಕ್ಷಾ ಪುಟದಿಂದ ಮುಂದುವರೆದಿದೆ)

ಈಗಾಗಲೇ ಅನೇಕ ಮಹನೀಯರು ಉದಾರವಾಗಿ ಯೋಜನೆಗಳನ್ನು ಬೆಂಬಲಿಸಿ ದಾನ ಮಾಡಲು ಮುಂದೆ ಬಂದಿದ್ದು **115 ಕೊಠಡಿಗಳಿಗೆ** ವಾಗ್ದಾನ ಮಾಡಿರುವುದಲ್ಲದೆ ಕಾಣಿಕೆಯನ್ನು ನೀಡಿರುತ್ತಾರೆ. ಪ್ರಸಾದ ನಿಲಯದ ನಿರ್ಮಾಣಕ್ಕೂ ಸಹಾಯ ಮಾಡಿರುತ್ತಾರೆ. ಈ ಸುಸಂದರ್ಭದಲ್ಲಿ ಶ್ರೀಮಠದ ಭಕ್ತಾದಿಗಳಾದ ತಮ್ಮಲ್ಲಿ ಪ್ರಾರ್ಥಿಸುವುದೇನೆಂದರೆ ತಾವು ಈ ವಜ್ರ-ಮಹೋನ್ನತ ಪುಣ್ಯ ಮಣಿಹದಲ್ಲಿ ಉದಾರವಾಗಿ ಕಾಣಿಕೆ ಅರ್ಪಿಸುವುದರ ಮೂಲಕ "**ವಜ್ರ ಮಹೋತ್ಸವ**" ಅಮೋಘವಾಗಿ ನಡೆಯಲು ಸಹಕಾರ ನೀಡುವಿರೆಂದು ನಂಬಿರುತ್ತೇವೆ.

ನಿಯೋಜಿತ ವಿದ್ಯಾರ್ಥಿನಿಲಯದ ಒಂದು ಕೊಠಡಿ ಕಟ್ಟಿಸಿಕೊಡುವವರ ಹೆಸರನ್ನು ಕೊಠಡಿಗೆ ಇಡಲಾಗುತ್ತೆ. ಅದಕ್ಕೆ ತಗಲುವ ಅಂದಾಜು ಮೊಬಲಗು 35,000 ರೂಗಳು ಆರು ಕೊಠಡಿಯ 'ಬ್ಲಾಕ್' ಕಟ್ಟಿಸಿಕೊಡುವವರ ಹೆಸರನ್ನು ಇಡೀ ಬ್ಲಾಕ್‌ಗೆ ಇಡಲಾಗುತ್ತದೆ.

ಪ್ರಸಾದ ನಿಲಯಕ್ಕೆ ಸಹಾಯ ಮಾಡುವವರ ಹೆಸರನ್ನು ನಿಲಯದ ಶಿಲಾ ಫಲಕದಲ್ಲಿ ಬರೆಸಲಾಗುತ್ತದೆ.

ದಯಮಾಡಿ ತಮ್ಮ ವಂತಿಕೆಯನ್ನು ಈ ಪುಣ್ಯ ಕಾರ್ಯಕ್ಕೆ ವಿನಿಯೋಗಿಸ ಬೇಕಾಗಿ ಪ್ರಾರ್ಥಿಸುತ್ತೇವೆ.

**ಪರಮ ಪೂಜ್ಯ ಶ್ರೀ ಶ್ರೀಗಳವರ ಸೇವಾ ಮಣಿಹಕ್ಕೆ ನಾವೆಲ್ಲ ನೀಡ ಬಹುದಾದ ಭಕ್ತಿ ಕಾಣಿಕೆಗೆ ಇದೊಂದು ಅಪೂರ್ವ ಅವಕಾಶವಾಗಿದೆ.**

**ಶರಣಾರ್ಥಿಗಳು**

**ಪದ್ಮಭೂಷಣ ಡಾ|| ಎಂ.ಸಿ. ಮೋದಿಯವರು,**
ಗೌರವಾಧ್ಯಕ್ಷರು.

**ಶ್ರೀ ಬಿ.ಎಸ್. ಮುದ್ದಪ್ಪನವರು**
ಕಾರ್ಯಾಧ್ಯಕ್ಷರು, (ನಿವೃತ್ತ)

**ಶ್ರೀ ಹಸಬಿಯವರು**
ಕಾರ್ಯದರ್ಶಿಗಳು.

“SIDDAGANGA” MONTHLY Reg. No. KRNO-9



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ,